ಪ್ರತಿಭಾ ಗ್ರಂಥಮಾಲೆ, ಧಾರವಾಡ—ಕಿರಣ ೪

# ವೈಕುಂಠನ ಮೃತ್ಯುಪತ್ರ

( ಶರತ್ಕಾದಂಬರಿ )



[redacted]ಲ್ಲಾರಿ



ಜೂನ್ ೧೯೪೪



ಬೆಲೆ ೧-೮-೦

ಪ್ರತಿಭಾ ಗ್ರಂಥಮಾಲೆ, ಧಾರವಾಡ — ಕಿರಣ ೪

# ವೈಕುಂಠನ ಮೃತ್ಯುಪತ್ರ

( ಶರತ್ಕಾದಂಬರಿ )



ಮಲ್ಲಾರಿ

ಜೂನ್ ೧೯೪೪



ಬೆಲೆ ೧-೮-೦

# ಪರಿವಿಡಿ





---

ಪ್ರತಿಭಾ ಗ್ರಂಥಮಾಲೆ, ಕಿರಣ ೫-೬

## ಸಾವಿನ ಉಡಿಯಲ್ಲಿ

ಪ್ರೊ. ಎನ್. ಕೆ. ಕುಲಕರ್ಣಿ, ಎಂ. ಎ. ಬಿ. ಟಿ. ಯವರ

ಸ್ವತಂತ್ರ ಸಾಮಾಜಿಕ ಕಾದಂಬರಿ

---

ಪ್ರಕಾಶಕರು :— ಬಾಲಚಂದ್ರ ಘೋಣೇಕರ,

ಪ್ರತಿಭಾ ಗ್ರಂಥಮಾಲೆ, ಧಾರವಾಡ.

ಮುದ್ರಕರು :—ಎಮ್. ಜಿ. ಪಾಲೇಕರ

ಹಿಂದಮಾತಾ ಮುದ್ರಣಾಲಯ, ಧಾರವಾಡ.

# ನಮಸ್ಕಾರ !

'ಶರಚ್ಚಂದ್ರ' ವಂಗ ಸಾಹಿತ್ಯ ಗಗನಾಂಗಣದಲ್ಲಿ ಬೆಳಗುತ್ತ, ತನ್ನ ಶಾಂತಸ್ನಿಗ್ಧ ಪ್ರಭೆಯಿಂದ ವಿಶ್ವವನ್ನೇ ಮುಗ್ಧಗೊಳಿಸಿದ್ದಾನೆ. ಅವನ ಪಾತ್ರ ನಿರ್ಮಾಣದ ರೀತಿ, ಅವನ ಸಹಜ ಸುಂದರ ನಿರರ್ಗಳ ಶೈಲಿ, ವಿಶೇಷವಾಗಿ ಅವನ ಸೂಕ್ಷ್ಮ ಸ್ವಭಾವ ವಿಶ್ಲೇಷಣದ ವೈಶಿಷ್ಟ್ಯಗಳೇ ಅವನಿಗೆ ವಿಶ್ವಮಾನ್ಯತೆ ಯನ್ನು ದೊರಕಿಸಿ ಕೊಟ್ಟಿವೆ. ಇವುಗಳನ್ನು ಗಣಿಸದೆ 'ಮನಸ್ಸೊಳಗೊಂದು ಮುನಿಸಿಟ್ಟುಕೊಂಡು' ಅವನ ಕೃತಿಗಳ ಬಗ್ಗೆ ಥೂಗುಟ್ಟುವವರೊಬ್ಬರಿಬ್ಬರು 'ಸಲೂನ್' ಪತ್ರಿಕೆಯ ವಿಮರ್ಶಕ(?) ರಿದ್ದಿರಬಹುದು. ಅವರಿಗೆ ಕವಿ ಲಕ್ಷ್ಮೀಶನ ಉತ್ತರವೇ ಸಾಕು—"ಇನ್ನಾವನಾದೊಡಂ ಕಷ್ಟನುಂ ಬಗೆವಪಂ ಚೋರಂಗೆ ವಿರಹಿಗಂ ದೃಷ್ಟಾಂತವಾಗಿ ಸಲ್ವಂ, ಸಂದೇಹಮೇಂ?" ಬೆಳ್ದಿಂಗಳು ಬೆಳ್ದಿಂಗಳೇ.

ವಂಗ ಸಾಹಿತ್ಯಿಕನೊಬ್ಬ ವಿಶ್ವಮಾನ್ಯನಾದುದು ಭಾರತಕ್ಕೆ ಹೆಮ್ಮೆಯ ವಿಷಯ. ಅಂತಹನ ಕೃತಿಗಳನ್ನು ಕನ್ನಡ ರಸಿಕರಿಗೆ ಪರಿಚಯ ಮಾಡಿ ಕೊಡುವುದು ಕರ್ನಾಟಕದಲ್ಲಿ ಸ್ವತಂತ್ರ ಪಕ್ವಾನ್ನಗಳ ದುರ್ಭಿಕ್ಷವಿರುವುದೆಂದಲ್ಲ; ವಂಗ ದೇಶದ ಹೆಸರಾದ ಬಾಣಸಿಗನೊಬ್ಬನ ಉತ್ತಮ ಪಕ್ವಾನ್ನಗಳ ಸವಿ ಯನ್ನೂ ನೋಡಿರೆಂದು,—ಹೋಳಿಗೆ ಮಂಡಿಗೆಗಳೊಡನೆ ಸಂದೇಶ-ರಸಗುಲ್ಲ ಗಳೂ ಇರಲೆಂದು. ಅದಕ್ಕಾಗಿ ನಾನು ಶಕ್ಯವಿದ್ದ ಮಟ್ಟಿಗೆ ನಡೆಸಿದ ಪ್ರಯತ್ನ ದಲ್ಲಿ ಈ 'ವೈಕುಂಠನ ಮೃತ್ಯುಪತ್ರ'ವೊಂದು. 'ಮತ್ತೂ ಶರತ್ ಸಾಹಿತ್ಯ ಬೇಕೆ' ಎಂದುದಕ್ಕೆ ಗೆಳೆಯ ಭಾಲಚಂದ್ರ 'ಹೋ ಇರಲಿ, ಏಕೆ ಸಂಕೋಚ ಪಡುತ್ತಿದ್ದೀ?' ಎಂದ; 'ಜೊತೆಗಾತಿ ಎಂಬ ಸ್ವತಂತ್ರ ಕಾದಂಬರಿ ಮೂರ ನೆಯ ಪ್ರಕಟನೆಯೆಂದು ಯೋಜಿಸಿದ್ದೆಯಲ್ಲವೆ? ಅದಕ್ಕೆ ಸಂಕೋಚದಿಂದ ಕೇಳಿದೆ, ಅಷ್ಟೆ' ಎಂದೆ ನಾನು. ಅದಕ್ಕವನು 'ಸ್ವತಂತ್ರ-ಗಿತಂತ್ರ. ಸ್ವತಂತ್ರ ಲೇಖಕರು ವೇಳೆಗೆ ಬರೆದುಕೊಟ್ಟರಲ್ಲವೆ? ನನ್ನ ಪ್ರಕಟನೆಗಳು ಸಕಾಲಕ್ಕೆ ಹೊರಡಬೇಕು—ಹೊತ್ತಿಗೆ ಯಾವುದೂ ಉತ್ತಮ ಪುಸ್ತಕ ಕೊಡಬಹುದು.

ಸ್ವತಂತ್ರ ಸ್ವತಂತ್ರವೆಂದು ಕಾದು ಕುಳಿತರೆ ತೀರಿಹೋಯಿತು, ಮಾಲೆ—' ಎಂದ. 'ಹಾಗಾದರೆ ಹೊಡೆ' ಎಂದೆ. ಹೀಗಾಗಿ ಗೆ. ಭಾಲಚಂದ್ರ ಇದನ್ನು ತನ್ನ ಪ್ರತಿಭಾ ಗ್ರಂಥಮಾಲೆಯಲ್ಲಿ ಪವಣಿಸಿಕೊಂಡ. ಈ ಬಗ್ಗೆ ನಾನು ಗೆಳೆಯನಿಗೆ ಕೃತಜ್ಞತೆ ಸಲ್ಲಿಸುವುದು ಯುಕ್ತವಂತೂ ಸರಿಯೆ. ಅಲ್ಲದೆ ಒಂದು ಮಾತು: ನಾನಿದನ್ನು ಬರೆದುದಾಗಲಿ ಅವನು ಪ್ರಕಟಿಸಿದುದಾಗಲಿ ಸಲೂನ್ ಪತ್ರಿಕೆಯ ಮುಂದೆ ಸಡ್ಡು ಹೊಡೆಯುವುದಕ್ಕಲ್ಲ. ಶರಚ್ಚಂದ್ರನನ್ನು ಮೆಚ್ಚಿದ, ಅವನನ್ನು ಓದಲು ಸದಾತವಕಪಡುವ ದೊಡ್ಡ ರಸಿಕವೃಂದದ ಕಡೆ ನೋಡಿ; ಶರಚ್ಚಂದ್ರನ ತಲೆಮೆಟ್ಟಿ ಹಾರುವ 'ಯಾವ ಹೊಸ ಸ್ವತಂತ್ರ ಲೇಖಕ, ಯಾವ ಮೂಲೆಯಲ್ಲಿದ್ದಾನೋ' ಪ್ರಕಾಶಕನಿಗೆ ತಿಳಿಯದುದಕ್ಕೆ, ಹುಡುಕಲಾಗದುದಕ್ಕೆ. ಅಂತೂ ಗುಣಜ್ಞ ರಸಿಕರಿಗಾಗಿ ಈ ಕೃತಿಯನ್ನು ನೀಡಲಾಗಿದೆ.

ಈ ಪುಸ್ತಕ ಎರಡು ಚಿಕ್ಕ ಕಾದಂಬರಿಗಳಿಂದ ೧೬೦ ಪುಟಗಳಷ್ಟು ಆಗುವುದಿತ್ತು. ಆದರೆ ಅಚ್ಚಿನ ಕೆಲಸ ಅರ್ಧಕ್ಕೆ ಮೇಲ್ಪಟ್ಟು ಪೂರಯಿಸಿದಾಗ ಬಂತಲ್ಲ ಗದೆ! ೧೯೪೪ ರ ಕಾಗದ ನಿಯಂತ್ರಣ (ಮಿತವ್ಯಯ) ಆಜ್ಞೆ! ಪ್ರಕಾಶಕರು ಕಳೆದ ವರ್ಷದ ಮೂವತ್ತು ಶತಾಂಶದಷ್ಟು ಮಾತ್ರ ಕಾಗದವನ್ನು— ಅದೂ ಹನ್ನೆರಡು ಸರಿಯಾದ ಭಾಗಗಳಲ್ಲಿ, ತಿಂಗಳಿಗೊಂದು ಭಾಗದಂತೆ— ಇನ್ನು ಮುಂದೆ ಬಳಸಬೇಕಂತೆ! ಸಿಡಿಲೇ ಬಡಿದಂತಾಯಿತು. ಕಂಪೋಜಿಟರನಿಗೆ ಕೊಡಬೇಕೆಂದಿದ್ದ ಎರಡನೆಯ ಕಾದಂಬರಿ ಕೆಳಗೆ ಬಿದ್ದು ಹೋಯಿತು! ಬೇರೆ ಎರಡು ಸಣ್ಣ ಕತೆಗಳನ್ನು ಕೊಟ್ಟೆ. ಈ ಮೂವತ್ತು ಶತಾಂಶ ಕಾಗದದಲ್ಲಿ ಯಾವ ಪ್ರಕಾಶಕರು ಎಷ್ಟು ಪುಟಗಳ ಎಷ್ಟು ಪುಸ್ತಕಗಳನ್ನು ಹೊರಡಿಸಲು ಸಮರ್ಥರಾಗುತ್ತಾರೋ! ಆದುದರಿಂದ ವಾಚಕರೇ, ಇನ್ನು ಮುಂದೆ ನಿಮ್ಮ ಓದನ್ನು ನೂರಕ್ಕೆ ಎಪ್ಪತ್ತರಷ್ಟು ತಗ್ಗಿಸಿರಿ; ಉಳಿದ ಮೂವತ್ತನ್ನೂ ಪ್ರತಿ ತಿಂಗಳೂ ಸಮಭಾಗದಲ್ಲಿ ಓದಿರಿ. ಇಷ್ಟೇ. ನಮಸ್ಕಾರ— ಒಂದಲ್ಲ, ಮೂರು ಹತ್ತಾಂಶ.

ಧಾರವಾಡ
೧೯೪೪ ಜೂನ್ ೨೫

ಮೋವುಂಡಿ ಮಲ್ಲಾರಿ

# ವೈಕುಂಠನ ಮೃತ್ಯುಪತ್ರ



## ೧

ಐದಾರು ವರುಷಗಳ ಹಿಂದೆ ಬಾಬೂಗಂಜದ ವೈಕುಂಠ ಮಜುಮ ದಾರನ ಕಿರಾಣಿ ಅಂಗಡಿ ಹಲವು ಏಡರುತೊಡರುಗಳೊದಗಿಯೂ ಉಳಿದುದಕ್ಕೆ ಎಷ್ಟೋ ಜನ ಆಶ್ಚರ್ಯಪಟ್ಟರು. ವೈಕುಂಠ ಹೇಗೆ ತೂಗಿಸಿ ಕೊಂಡನೆಂಬುದು ಯಾರಿಗೂ ತಿಳಿಯದು. ಅಂದಿನಿಂದ ಅಂಗಡಿ ಹೆಚ್ಚಳ ಹೊಂದುತ್ತಲೇ ಬಂತು. ಏನೂ ಕಷ್ಟವಿಲ್ಲವೆಂದಾದ ಮೇಲೆ, ವೈಕುಂಠ ತನ್ನ ಹಿರಿಯ ಮಗನನ್ನು ಸಾಲೆ ಬಿಡಿಸಿ ಅಂಗಡಿಗೆ ಸೇರಿಸಿದ. ಆಗಲೂ ಕೆಲವರಿಗೆ ಆಶ್ಚರ್ಯವಾಯಿತು 'ನೋಡಿದಿರಾ ಮುದುಕನ ರೀತಿ! ಹುಡುಗ ಅಷ್ಟು ಚುರುಕು ಇರಲಿಕ್ಕಿಲ್ಲ, ಒಂದು ವರ್ಷ ಪಾಸ್ ಆಗಿರಲಿಕ್ಕಿಲ್ಲ. ಇಷ್ಟಕ್ಕೆ ಹೀಗೆ ಮಾಡುವುದೆ? ಅವರವ್ವ ಬದುಕಿದ್ದರೆ ಹೀಗಾಗಬಹುದಿತ್ತೆ? ಕಿರಿಯ ಮಗನನ್ನು ಸಾಲೆಬಿಡಿಸಿ ನೋಡಲಿ, ಪೊರಕೆಯಿಂದ ಹುಚ್ಚಳಿಸಿಬಿಡುವಳು!' ಎಂದು ಜನರಾಡಿಕೊಂಡರು.

ಹಿರಿಯ ಮಗ ಗೋಕುಲ ಚುರುಕಲ್ಲ ನಿಜವೇ. ವರ್ಗದಲ್ಲಿ ಅವನಿಗೆ ಪಾಠ ಚೆನ್ನಾಗಿ ಹಿಡಿಯುತ್ತಿರಲಿಲ್ಲ. ಫಲಿತಾಂಶ ಹೊರಬಿದ್ದ ದಿನ ಅವನು ಸಣ್ಣ ಮೋರೆ ಮಾಡಿಕೊಂಡು ಬಂದು ಮಲತಾಯಿಯ ಮುಂದೆ ಅತ್ತುಬಿಟ್ಟ. ಅವಳು ಅವನನ್ನು ತೊಡೆಯ ಮೇಲೆ ಕರೆದುಕೊಂಡು, ಸ್ನೇಹದಿಂದ ತಲೆಯ

ಮೇಲೆ ಬೆನ್ನ ಮೇಲೆ ಕೈಯಾಡಿಸಿ, "ಗೋಕುಲ, ಜೀವನದಲ್ಲಿ ಇಂಥ ಕಷ್ಟ ಬಂದೇ ಬರುವವು. ನಗೆಮೊಗದಿಂದ ಸಹಿಸಿಕೊಂಡು ಪುನಃ ಯತ್ನಿಸುವ ಹುಡುಗ ಮುಂದಾಗುತ್ತಾನೆ. ಅಳಬೇಡ ಮಗೂ, ಇನ್ನು ಮನಸುಗೊಟ್ಟು ಕಲಿ, ಮುಂದಿನ ವರ್ಷ ಪಾಸಾಗುತ್ತೀ" ಎಂದಳು.

ಕಿರಿಯ ಮಗ ವಿನೋದ ಜಿಗಿದಾಡುತ್ತ ಮನೆಗೆ ಬಂದ ಅವನು ಅಣ್ಣನಿಗಿಂತ ಆರು ವರ್ಷಕ್ಕೆ ಚಿಕ್ಕವ; ಸಾಲೆಯಲ್ಲಿ ಮೂರು ನಾಲ್ಕು ವರ್ಗ ಹಿಂದೆ. ಆದರೆ ವರ್ಗದಲ್ಲಿ ಮೊದಲಿಗನಾಗಿ ಒಮ್ಮೆಲೆ ಡಬಲ್ ಪ್ರಮೋಶನ್ ಪಡೆದಿದ್ದ. ಈ ಸುವಾರ್ತೆ ಕೇಳಿ ತಾಯಿ ಅವನನ್ನು ತೊಡೆಯ ಮೇಲೆ ಸೆಳೆದುಕೊಂಡು, ಪುಲಕಿತ ಚಿತ್ತದಿಂದ ಒಹುವಾಗಿ ಹರಸಿದಳು.

ವೈಕುಂಠ ರಾತ್ರಿ ಅಂಗಡಿಯಿಂದ ಮನೆಗೆ ಬಂದ. ಇಬ್ಬರು ಮಕ್ಕಳ ಸಮಾಚಾರ ಕೇಳಿ ಚೆಲ್ಲೋ ಕೆಟ್ಟ ಏನೂ ಆಡಲಿಲ್ಲ; ಮಕ್ಕಳ ಭಾರ ಅವರ ತಾಯಿಗೆ ಒಪ್ಪಿಸಿಬಿಟ್ಟಿದ್ದ. ನಿಯಮದಂತೆ ಕೈಕಾಲು ತೊಳೆದುಕೊಂಡು, ಊಟ ಮುಗಿಸಿ, ತಾಂಬೂಲ ಮೆಲ್ಲುತ್ತ ಖಾತೆ ತೆರೆದುಕೊಂಡು ಕುಳಿತ.

## ೨

"ಅವ್ವಾ, ಭವಾನೀ ಇದ್ದೀಯಾ?"

ಎನ್ನುತ್ತ ಬಡಿಗೆಯ ಸದ್ದು ಮಾಡುತ್ತ ಜಯಲಾಲ ಬನರ್ಜಿ ಮಾಸ್ತರು ಅಂದೇ ಸಂಜೆಗೆ ವೈಕುಂಠನ ಮನೆಗೆ ಹೋದರು. ಅವರು ವೈಕುಂಠನ ಅಂಗಡಿಯಲ್ಲಿ ಬಹಳ ಉದ್ರಿ ಮಾಡಿದ್ದರು. ಅಂತೆಯೇ ಅವನ ಗೃಹಿಣಿಯನ್ನು ಅವ್ವಾ ಎಂದು ಕರೆಯುತ್ತಿದ್ದರು.

ಭವಾನಿ ಪಡಸಾಲೆಯಲ್ಲಿ ಚಾಪಿ ಹಾಸಿಕೊಂಡು, ಪಕ್ಕದಲ್ಲಿ ಹುಡುಗರನ್ನು ಕುಳ್ಳಿರಿಸಿಕೊಂಡು ಕುಳಿತಿದ್ದಳು. ಚಟ್ಟನೆದ್ದು ಆಸನ ಹಾಕಿದಳು. ಬನರ್ಜಿ ಮಹಾಶಯರು ಕೂಡ್ರು ಕೂಡ್ರುತ್ತಲೇ ಆರಂಭಿಸಿದರು: "ರತ್ನ

ಗಭ್ರಾ ಎಂದರೆ ನೀ ಅವ್ವ! ಎಂಥ ಹುಡುಗನನ್ನು ಹಡೆದಿದ್ದೀ! ನಿಮ್ಮ ವಿನೋದ ವರ್ಗದಲ್ಲಿ ಎಲ್ಲರಿಗಿಂತ ಫಸ್ಟ್! ಒಮ್ಮೆಲೆ ಡಬಲ್ ಪ್ರಮೋಶನ್! ಇವನು ಪಡೆದ ನಂಬರು ನೋಡಿ ಹೆಡ್ ಮಾಸ್ತರ್ ಮಹಾಶಯರು ಕೂಡ ಬೊಟ್ಟು ಕಚ್ಚಿದರು! ನಾನಂತೂ ಹುಡುಗರಿಗೆ ಕಲಿಸಿ ಕಲಿಸಿಯೇ ಮುದುಕನಾಗಿದ್ದೇನೆ. ಆದರೆ ಅವ್ವಾ, ವಿನೋದನಂಥ ಹುಡುಗನನ್ನು ಎಂದೂ ನೋಡಿರಲಿಲ್ಲ. ನಾ ಇದನ್ನೇ ಹೇಳಲಿಕ್ಕೆ ಬಂದಿದ್ದೆ— ನಿಮ್ಮ ಮಗ ಹೈಕೋರ್ಟ್ ಜಜ್ಜಾಗುತ್ತಾನೆ— ಸಂದೇಹವೇ ಇಲ್ಲ."

ಭವಾನಿ ಸುಮ್ಮನೆ ಕುಳಿತಿದ್ದಳು. ಬನರ್ಜಿ ಮಹಾಶಯರು ಉತ್ಸಾಹಿತರಾಗಿ ಮಾತನಾಡತೊಡಗಿದರು: " ಮತ್ತೀ ಗೋಕುಲನೋ! ಅವ ಎಲ್ಲಿ, ಇವ ಎಲ್ಲಿ! ಇವ ಕತ್ತೆಗಳ ಸರದಾರನೇ ಸೈ. ಪರೀಕ್ಷೆಯ ದಿನ ನಾನೇ ಇವರ ಕಾವಲಿಗಿದ್ದೆ. ಮೇಜಿನಡಿಯಲ್ಲಿ ಪುಸ್ತಕ ಇಟ್ಟುಕೊಂಡು ಎಷ್ಟೋ ಹುಡುಗರು ಕಾಪಿ ಮಾಡಿದರು. ಇವನ ಎರಡೂ ಕಡೆ ಮಲ್ಲಿಕರ ಎರಡು ಹುಡುಗರು ಕಾಪಿ ಮಾಡುತ್ತಿದ್ದರು. ನಾ ನೋಡಿಯೂ ನೋಡದಂತಿದ್ದೆ. ಈ ದುರ್ಭಾಗ್ಯನಿಗೆ ಒಮ್ಮೆ ಕಣ್ಣುಸನ್ನೆ ಮಾಡಿದೆ ಕೂಡ. ಆದರೆ ಇವ ಪೆದ್ದ ಬಸವಣ್ಣನಂತೆ ಕೂತುಬಿಟ್ಟಿದ್ದ; ಎಡಕೆ ಬಲಕೆ ನೋಡಲಿಲ್ಲ ಕೂಡ. ಇಲ್ಲದಿದ್ದರೆ, ಮಲ್ಲಿಕರ ಹುಡುಗರೇ ಪಾಸಾದರು, ಇವ ಆಗುತ್ತಿದ್ದಿಲ್ಲವೆ? ಹೌದೋ ಅಲ್ಲವ್ವೋ, ಇವನನ್ನೇ ಕೇಳಿರಿ.'' ಎಂದು ಜಯಲಾಲ ಮಾಸ್ತರ್ ಬಡಿಗೆ ಎತ್ತಿ ಗೋಕುಲನನ್ನು ಹೊಡೆಯುವಂತೆ ನಟಿಸಿ, ಹುಡುಗರನ್ನು ಹೊಡೆಯುವ ಮೈಯುಂಡುಹೋದ ಪ್ರವೃತ್ತಿಯನ್ನು ಶಾಂತಗೊಳಿಸಿಕೊಂಡರು. ಆದರೆ ಗೋಕುಲನ ಮೈಗೆ ಮಾತ್ರ ಮುಳ್ಳು ಬಂದಿತು. ತಕ್ಷಣ ಭವಾನಿ ಮಲಮಗನನ್ನು ಎದೆಗವಚಿಕೊಂಡಳು.— ಗೋಕುಲನಿಗೆ ತಾಯಿ ಇಲ್ಲ, ತಾಯಿಯ ನೆನಪೂ ಇಲ್ಲ. ಮಲತಾಯಿಯಿಂದಲೇ ದೊಡ್ಡವನಾಗಿದ್ದಾನೆ.— ಅವಳು ಅವನನ್ನು ಅಕ್ಕರತೆಯಿಂದ ಮೈದಡವುತ್ತ ಮೃದುಸ್ವರದಿಂದ ನುಡಿದಳು. "ಮಗೂ, ಎಲ್ಲ ಹುಡುಗರು

ಪುಸ್ತಕ ನೋಡಿ ಬರೆದರು, ನೀ ಮಾತ್ರ ಯಾವ ಕಡೆಗೂ ಕಣ್ಣೆತ್ತಿ ನೋಡಲಿಲ್ಲವೆ?''

ಗೋಕುಲ ನೀರವವಾಗಿದ್ದ. ತನ್ನ ಅಯೋಗ್ಯತೆಗೆ ಇದೇ ಕಾರಣ ವೆಂದು ತಿಳಿದು ಅತ್ಯಂತ ಲಜ್ಜಿತನಾಗಿ ಮುಖ ತಗ್ಗಿಸಿದ. ಈ ಮಾತುಕತೆ ಒಳಗೆ ವೈಕುಂಠನ ಕಿವಿಗೆ ಬೀಳಲು, ಅವನು ಖಾತೆಯಿಂದ ಮುಖವೆತ್ತಿ ಕೇಳತೊಡಗಿದ.

ಭವಾನಿ ಮುಗುಳ್ನಕ್ಕು, ''ಈ ವರ್ಷ ಚೆನ್ನಾಗಿ ಓದಿ, ಮುಂದಿನ ವರ್ಷ ಇವನೂ ಫಾಸ್ಟ್ ಆಗುತ್ತಾನೆ'' ಎಂದಳು.

ಮಲತಾಯಿಯ ಈ ಸ್ನೇಹಸ್ವರವನ್ನು ಬನರ್ಜಿ ಮಹಾಶಯರಿಗೆ ಗುರುತಿಸಲಾಗಲಿಲ್ಲ. ಸವತಿಯ ಮಕ್ಕಳ ಬಗ್ಗೆ ಮಲತಾಯಿಗೆ ವಿದ್ವೇಷ ವಿರುವುದು ಸ್ವತಃಸಿದ್ಧ ಸತ್ಯವೆಂದು ಅವರ ಭಾವನೆ. ಇದಕ್ಕೆ ವ್ಯತಿರಿಕ್ತ ವಾಗಿ ಎಲ್ಲಿಯಾದರೂ ನಡೆದೀತೆಂದು ಅವರಿಗೆನಿಸಲಿಲ್ಲ. ಇದು ಕೇವಲ ತೋರಿಕೆಯ ರೀತಿಯೆಂದು ತಿಳಿದು, ಗೋಕುಲನನ್ನು ಮತ್ತಷ್ಟು ಕೀಳ್ಮಾಡುವ ಉದ್ದೇಶದಿಂದ, ನಾಲಗೆಯಿಂದ ತಾಲುವಿನಲ್ಲಿ ಒಂದು ತರದ ಧ್ವನಿಮಾಡುತ್ತ ನುಡಿದರು: ''ಹಾ ಹಾ! ಗೋಕುಲ ಫಾಸ್ಟ್ ಆಗುತ್ತಾನೆ! ಪೂರ್ವದ ಸೂರ್ಯ ಪಶ್ಚಿಮಕ್ಕೆ ಮೂಡುತ್ತಾನೆ! ಫಾಸ್ಟ್ ಆಗುವವ, ಅವ್ವಾ, ಇಕಾ, ನಿನ್ನ ಎಡಕ್ಕೆ ಕೂತಿದ್ದಾನೆ!'' ಎಂದು ಅವರು ವಿನೋದನನ್ನು ತೋರಿಸುತ್ತ, ಒಣನಗೆಯೊಡನೆ "ಅಂತೇನು ಈ ಹುಡುಗನಿಗೆ ನಾಚಿಕೆ ಲಜ್ಜೆ ಇದೆಯೆ? ತಿರುಗಿ ಹುಡುಗರೆದುರು ಹೆಮ್ಮೆಕೊಚ್ಚಿಕೊಳ್ಳುತ್ತಾನೆ— 'ನಾನೇನೋ ಪಾಸಾಗಲಿಲ್ಲ ನಿಜ. ಆದರೆ ನನ್ನ ತಮ್ಮ ಎಲ್ಲರಿಗಿಂತ ಮೇಲು! ಯಾರ ತಮ್ಮಂದಿರು ಹೀಗೆ ಡಬಲ್ ಪ್ರಮೋಶನ್ ಪಡೆದಿದ್ದಾರೆ ಹೇಳಿರೋಽಲೇ!' ಎಂದು. ಕೇಳಿದೆಯಾ ಅವ್ವಾ! ತಮ್ಮ ಫಾಸ್ಟ್ ಆದುದಕ್ಕೆ ನಾಚಿಕೊಂಡು ಸಾಯುವುದು ಒತ್ತಟ್ಟಿಗುಳಿಯಿತು, ಜಂಬ ಕೊಚ್ಚುತ್ತಾನೆ!'' ಎಂದರು.

ಭವಾನಿಗೆ ತಡೆಯುವುದಾಗಲಿಲ್ಲ. ಗೋಕುಲನನ್ನು ಬರಸೆಳೆದು ಅವನ ಮುಖವನ್ನು ಎದೆಗವಚಿಕೊಂಡಳು. ಅವನು ನಾಚಿಕೆಸಾವಾಗಿ ತಾಯಿಯ ಹೃದಯದಲ್ಲಿ ಮುಖ ಮರೆಸಿಕೊಂಡ. ಗೋಕುಲ ತನ್ನ ತಮ್ಮನನ್ನು ಎಷ್ಟೊಂದು ಪ್ರೀತಿಸುವನೆಂಬುದನ್ನು ಆಕೆ ಬಲ್ಲಳು.

ಬನರ್ಜಿ ಮಹಾಶಯರು ನಾಲ್ಕು ಮಾಮೂಲಿಯ ಮಾತನಾಡಿ, ವಿನೋದನಿಗೆ ಈಗಲೇ ಮನೆಯೊಳಗೆ ಕಲಿಸಲು ಯೋಗ್ಯ ಶಿಕ್ಷಕರನ್ನು ಇಡುವುದು ಉಚಿತವೆಂದು ಹೇಳಬಯಸಿದ್ದರು. ಆದರೆ ಅದೇ ಹೊತ್ತಿಗೆ ಪಕ್ಕದ ಕೋಣೆಯಿಂದ ಬೆಳಕು ಬಂದು ತಾಯಿ–ಮಕ್ಕಳ ಮೇಲೆ ಬಿದ್ದು ಅವರ ಮನಸಿಗೆ ಆಘಾತವಾದಂತಾಯಿತು. ಭವಾನಿ ಗೋಕುಲನನ್ನು ಎದೆಗಪ್ಪಿಕೊಂಡು ಬೋಳಯಿಸುವ ರೀತಿ ಮಲಮಗನಾದರೆ ಹೇಗಿರಬೇಕೋ ಹಾಗಿರಲಿಲ್ಲ. ಆದುದರಿಂದ ತುಲನಾತ್ಮಕ ವ್ಯಾಖ್ಯಾನವನ್ನು ಮುಂದುವರಿಸುವುದು ಉಚಿತವೋ ಅಲ್ಲವೋ ಎಂದವರಿಗೆ ಸಂದೇಹವುಂಟಾಯಿತು. ಮಾತು ಹೊರಳಿಸಬೇಕಾಯಿತು.

ಭವಾನಿ ಈವರೆಗೂ ಸುಮ್ಮನೆ ಕೇಳುತ್ತಿದ್ದಳು; ಈಗಲೂ ಹೆಚ್ಚು ಮಾತನಾಡಲಿಲ್ಲ ಕೊನೆಗೆ ಬನರ್ಜಿ ಮಹಾಶಯರು ರಾತ್ರಿ ಬಹಳವಾಯಿತೆಂದು ಹೇಳಿ, ಬಾಯ್ತುಂಬ ಹರಸುತ್ತ, ವಿನೋದ ಮುಂದೆ ಜಡ್ಜಿಯಾಗುವನೆಂದು ಮತ್ತೆ ಮತ್ತೆ ನಿಃಸಂದಿಗ್ಧವಾಗಿ ಉಸಿರುತ್ತ, ಬಡಿಗೆ ತೆಗೆದುಕೊಂಡು ಎದ್ದರು. ಕೋಣೆಯಲ್ಲಿ ಕುಳಿತಿದ್ದ ವೈಕುಂತ ಇದೇ ಸಮಯ ಕಾಯುತ್ತಿದ್ದನೇನೋ.— ಎದುರಿಗೆ ಬಂದು ಕಠೋರ ಭಾವದಿಂದ ಪ್ರಶ್ನಿಸಿದ: “ ಎಲೇ ಗೋಕುಲ, ಎಲ್ಲರೂ ಪುಸ್ತಕ ನೋಡಿಕೊಂಡು ಬರೆದು ಪಾಸಾದರು, ನೀನೇಕೆ ನೋಡಿಕೊಂಡು ಬರೆಯಲಿಲ್ಲ ? ”

ಗೋಕುಲ ಹೆದರಿ ಮುದುರಿಕೊಂಡು ಮೊದಲಿನಂತೆಯೇ ಮುಖ ಮುಚ್ಚಿಕೊಂಡ. ಬಹಳ ಬೆದರಿಸಿದ ಮೇಲೆ ಅವನು ಹೇಳಿದುದರ ಭಾವಾರ್ಥ

ಇಷ್ಟು: ಪೂರ್ವಾರ್ಹ್ನದಲ್ಲಿಯೇ ಹೆಡ್‌ಮಾಸ್ತರು ಬಂದು ಕಳ್ಳತನದಿಂದ ಕಾಪಿ ಮಾಡಬಾರದೆಂದು ಹೇಳಿದ್ದರು.

ವೈಕುಂಠ ಕೆಲ ಹೊತ್ತು ನಿಃಶಬ್ದವಾಗಿ ನಿಂತು ಏನು ವಿಚಾರ ಮಾಡಿದನೋ—ಕೊನೆಗೆ "ನಾಳೆಯಿಂದ ನೀ ಸಾಲೆಗೆ ಹೋಗಬೇಡ. ನನ್ನ ಸಂಗತಿ ಅಂಗಡಿಗೆ ಬಾ," ಎಂದು ಮತ್ತೆ ಕೋಣೆಯೊಳಗೆ ಹೋಗಿ ತನ್ನ ಕೆಲಸದಲ್ಲಿ ತೊಡಗಿದ. ಇದೊಂದು ವಾಡಿಕೆಯ ಶಾಸನ ಇರಬಹುದೆಂದು ಭವಾನಿ ಆಗ ಏನೂ ಮಾತನಾಡಲಿಲ್ಲ. ಮುಂಜಾನೆ ವೈಕುಂಠ ನಿಜವಾಗಿಯೂ ಅವನನ್ನು ಅಂಗಡಿಗೆ ಕರೆದುಕೊಂಡು ಹೊರಟೊಡನೆ ಅವಳು ಸಿಟ್ಟು ಬೆಂಕಿಯಾಗಿ ಅಡ್ಡಿ ಮಾಡಿದಳು.

"ಇದೇನು ಹುಚ್ಚುಚಾಳಿ! ಇನ್ನೂ ಹಾಲುಗಲ್ಲದ ಹುಡುಗ ನಿಮ್ಮಂಗಡಿ ನಡೆಸಬೇಕೆ? ಅದಾಗದು. ನಾ ಜೀವಂತ ಇರುವತನಕ ನನ್ನ ಗೋಕುಲನನ್ನು ಸಾಲೆ ಬಿಡಿಸಗೊಡುವುದಿಲ್ಲ. ನಾ ಇಂಥ ಸಿಟ್ಟನ್ನು ನೋಡಿಲ್ಲ—" ಎಂದು ಗೃಹಿಣಿ ಸಿಟ್ಟುಸಿಟ್ಟಿಲೆ ಮಗನನ್ನು ಎಳೆದುಕೊಂಡು ಹೊರಟಳು. ವೈಕುಂಠ ನಸುನಕ್ಕು ನುಡಿದ: "ಅಲ್ಲಾ, ಸಿಟ್ಟು ಯಾರಿಗೆ ಎಂದೆ?"

"ನಿಮಗೆ. ಮತ್ತಾರಿಗೆ?"

"ನನಗೆ ಸಿಟ್ಟು ಬಂದದ್ದು ಎಂದಾದರೂ ನೋಡಿದ್ದೆಯಾ?"

"ಹಾಗಾದರೆ ನೀವು ನಡೆಸಿದ್ದೇನು? ಚಿಕ್ಕಂದಿನಲ್ಲಿ ಪಾಸು ನಪಾಸು ಎರಡೂ ಇದ್ದದ್ದೇ. ಅದಕ್ಕೆ ಸಾಲೆ ಬಿಡಿಸುವುದೇ?"

ವೈಕುಂಠ ಗೋಕುಲನನ್ನು ಬೇರೆ ಕಡೆ ಕಳಿಸಿಬಿಟ್ಟು ನಗುಮೊಗದಿಂದ ಹೇಳಿದ: "ಇಲ್ಲಿ ಕೇಳು, ನನಗೆ ಸಿಟ್ಟಿಲ್ಲ. ನಿನ್ನ ಹಿರಿಯ ಮಗನನ್ನು ನಾನು ಪ್ರೀತಿಯಿಂದಲೇ ಅಂಗಡಿಗೆ ಕರೆದುಕೊಂಡು ಹೋಗುವುದು. ನಿನ್ನ ಕಿರಿಯಮಗ ಎಂದಾದರೂ ಜಡ್ಜಿಯಾಗುತ್ತಾನೋ ಇಲ್ಲವೋ ಬನರ್ಜಿ ಮಹಾಶಯರಂತೆ ನಾನೇನು ಭರವಸೆ ಕೊಡಲಾರೆ. ಆದರೆ ನನ್ನ ತರು

ವಾಯ ಗೋಕುಲನ ಅವಲಂಬನದಿಂದ ನೀವಿಬ್ಬರೂ ನಿಶ್ಚಿಂತರಾಗಿರ ಬಲ್ಲಿರೆಂದು ಮಾತ್ರ ನಿಶ್ಚಿತ ಹೇಳಬಲ್ಲೆ.''

ಭವಾನಿಗೆ ವಾಗತ್ಯವೆನಿಸಿ ಕಣ್ಣೀರು ಬಂತು. "ಅದು ನನಗೆ ಗೊತ್ತಿದೆ. ಆದರೆ ನಮ್ಮ ಗೋಕುಲ ಬಲು ಸರಳ ಹುಡುಗ. ಇವನಿಗೆ ನಿಮ್ಮ ವ್ಯಾಪಾರದ ಹಿಡಿತ ಹೊಡೆತ ತಿಳಿಯುಬಹುದೆ? ಇವನಿಗೆ ಎಲ್ಲರೂ ಇಂಗು ಹಚ್ಚಬಹುದು." ಎಂದಳು.

"ಎಲ್ಲರೂ ಠಕ್ಕಿಸಲಾರರು. ಆದರೂ ಕೆಲಕೆಲವರು ಠಕ್ಕಿಸುವರು ನಿಜ. ಠಕ್ಕಿಸಲಿ. ಆದರೆ ಇವನು ಯಾರನ್ನೂ ಠಕ್ಕಿಸುವುದಿಲ್ಲವಷ್ಟೇ! ಇಷ್ಟು ಸಾಕು. ಲಕ್ಷ್ಮಿ ತಾನಾಗಿ ಬರುವಳು.'' ಮಾತಾಡುತ್ತಿದ್ದಂತೆ ಅವನ ನೇತ್ರಗಳೂ ಸಜಲವಾದವು. ಅವನೂ ಒಳ್ಳೆಯ ಸರಳ ಮನುಷ್ಯ. ಆದರೆ ಬಂಡವಾಳದ ಅಭಾವದಿಂದ ಬಹಳ ಕಷ್ಟಪಡಬೇಕಾಯಿತು. ಈಗ ಸ್ವಲ್ಪ ಸಂಗ್ರಹ ಮಾಡಿದ್ದರೂ ಕಾಲವು ಕಠಿಣ ಬಂದಿದೆ, ಆಗಿನ ಸತುವೂ ಇಲ್ಲ ಲಗುಬಗೆಯಿಂದ ಕಣ್ಣ ಮೇಲೆ ಕೈಯಾಡಿಸಿಕೊಂಡು ನುಡಿದ: "ಗೋಕುಲ ಈ ಚಿಕ್ಕ ವಯಸ್ಸಿನಲ್ಲಿಯೆ ಎಂಥ ದೊಡ್ಡ ಲೋಭದಿಂದ ಪಾರಾಗಿ ಬಂದಿದ್ದಾನೆಂಬುದು ನಿನಗೆ ಗೊತ್ತಿಲ್ಲ. ಇದರಿಂದ ವ್ಯವಹಾರದ ಹಿಡಿತಹೊಡೆತ ಹದಿನಾಲ್ಕಾಣೆ ಅವನಿಗೆ ಬಂದಂತೆಯೇ ಆಗಿದೆ. ನಾ ಕಲಿಸಬೇಕಾದ್ದು ಇನ್ನೆರಡಾಣೆ ಮಾತ್ರ.''

"ಆದರೆ ಜನ ಏನೆಂದಾರು?"

"ಮುಂದಿಯ ಮಾತು ನನಗೆ ತಿಳಿಯದು, ನನ್ನದು ಮಾತ್ರ ನನಗೆ ತಿಳಿಯುತ್ತದೆ. ನಿಮ್ಮನ್ನು ಇವನಿಗೊಪ್ಪಿಸಿದೆನೆಂದರೆ ನಿಶ್ಚಿಂತೆಯಿಂದ ಕಣ್ಣು ಮುಚ್ಚಬಹುದೆಂದು ನನಗೆನಿಸುತ್ತದೆ."

ಗಂಡನ ಸ್ವಾಸ್ಥ್ಯ ದಿನದಿನಕ್ಕೆ ಕೆಡುತ್ತಿದೆ ಎಂಬುದನ್ನು ಭವಾನಿ ಈಗ ಕೆಲ ದಿನಗಳಿಂದ ನೋಡುತ್ತಲಿದ್ದಳು. ಅವನ ಕೊನೆಯ ಮಾತಿನಿಂದ ಅವಳಿಗೆ ಅಳು ಬಂದಿತು. "ಒಳ್ಳೆಯದು, ಕರೆದುಕೊಂಡು ಹೋಗಿರಿ''

ಎಂದು, ತಾನೇ ಹೋಗಿ ಗೋಕುಲನನ್ನು ಕರೆತಂದು ಗಂಡನಿಗೊಪ್ಪಿಸಿದಳು.

" ಇವರ ಸಂಗಡ ಅಂಗಡಿಗೆ ಹೋಗು ಮಗು. ನೀ ಸಮರ್ಥನಾದರೆ ನಮ್ಮ ಬಾಳು! "

ಗೋಕುಲ ತಂದೆ ತಾಯಿಗಳ ಮುಖ ನೋಡಿ ವಿಸ್ಮಿತನಾದ. ಪಾಪ, ಅವನು ನಿನ್ನೆ ರಾತ್ರಿಯೇ ಈ ವರ್ಷ ಹೇಗಾದರೂ ಮಾಡಿ ಉತ್ತೀರ್ಣನಾಗಬೇಕೆಂದು ಸಂಕಲ್ಪ ಮಾಡಿದ್ದ. ಸಾಲೆ ಬಿಟ್ಟು ಅಂಗಡಿಗೆ ಹೋಗುವುದು ಗೌರವವೆಂದು ಯಾವ ಹುಡುಗರೂ ತಿಳಿಯುವುದಿಲ್ಲ. ಅವನೂ ತಿಳಿಯಲಿಲ್ಲ. ಆದರೆ ಅವನೆಂದೂ ತಾಯಿಯ ಮಾತು ಮೀರುವವನಲ್ಲ. ಸಹಪಾಠಿಗಳ ವ್ಯಂಗ್ಯೋಕ್ತಿ ಅವನ ಮನಸಿಗೆ ಚುಚ್ಚುತ್ತಿದ್ದವು. ಆದರೂ ಅವನು ನಿಶ್ಶಬ್ದವಾಗಿ ತಂದೆಯನ್ನು ಹಿಂಬಾಲಿಸಿದ.

೩

ಹತ್ತು ವರ್ಷಗಳು ಕಳೆದುಹೋಗಿವೆ. ಜರಾಗ್ರಸ್ತ ವೈಕುಂಠ ಸಾಯಲಾಗಿದ್ದಾನೆ. ಆದರೆ ಗೋಕುಲನ ವಿಷಯದಲ್ಲಿ ಅವನು ತಪ್ಪು ಮಾಡಲಿಲ್ಲವೆಂಬುದು ಅವನ ಅಂಗಡಿಯ ಕಡೆ ನೋಡಿದರೇ ಗೊತ್ತಾಗುವುದು. ಈಗ ಗಂಜದಲ್ಲಿ ಕಿರಾಣಿ ಅಂಗಡಿಯಿಲ್ಲ. ಲಕ್ಷಗಟ್ಲೆ ವ್ಯವಹಾರ ನಡೆಯುವ ದೊಡ್ಡ ಮಂಡಿಯಾಗಿದೆ. ವಿನೋದ ಕಲಕತ್ತೆಯಲ್ಲಿ ಎಂ. ಎ. ಓದುತ್ತಿದ್ದಾನೆ. ವೈಕುಂಠ ಮೊಮ್ಮಗ-ಮೊಮ್ಮಗಳ ಮುಖ ನೋಡಿ ಹರುಷದಿಂದಲೇ ಸಾಯುತ್ತಿದ್ದ. ಆದರೆ ಕಿರಿಯಮಗನ ವಿಷಯದಲ್ಲಿ ಜನರಾಡಿಕೊಳ್ಳುತ್ತಿದ್ದ ಅಭದ್ರವಚನಗಳಿಂದ ಕೊನೆಯ ದಿನಗಳು ಅವನಿಗೆ ಅತ್ಯಂತ ಭಾರವಾಗಿದ್ದವು.

ಒಂದಿನ ಬೆಳಗಿನಲ್ಲಿ ವೈಕುಂಠನಿಗೆ ಬಾಳಿನ ಕೊನೆಯ ಕರೆ ಕೇಳಿತು. ಮೈಯೊಳಗೆ ಒಂದು ಬಗೆಯ ಹೊಸ ವೇದನೆಯುಂಟಾಗಿಯೇ ಎಚ್ಚತ್ತ.

ಹೆಂಡತಿಯನ್ನು ಕರೆದು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಮ್ಲಾನಮುಖದಿಂದ ಕಿಂಚಿತ್ ನಕ್ಕು ಹೇಳಿದ: " ನನ್ನ ಆಯುಷ್ಯ ತುಂಬುತ್ತ ಬಂತು. ಆದುದರಿಂದ ಸ್ವಲ್ಪ ಮುಂಚೆಯೇ ಹೋಗುತ್ತಿದ್ದೇನೆ. ನೀ ನನ್ನ ಹತ್ತಿರ ಬರುವವರೆಗೂ ಇಬ್ಬರು ಮಕ್ಕಳನ್ನೂ ನೋಡಿಕೋ. "

ಗಂಡನ ಶೀರ್ಣಕರವನ್ನು ತನ್ನೆರಡು ಕೈಗಳಲ್ಲಿಯೂ ಹಿಡಿದುಕೊಂಡು ಭವಾನಿ ನೀರವವಾಗಿ ಅಳತೊಡಗಿದಳು. ಅವನು ಮತ್ತೆ ಹೇಳಿದ: "ಗೋಕುಲನನ್ನು ಬಿಟ್ಟು ಅವನ ತಾಯಿ ತೀರಿಕೊಂಡಳು. ಎರಡನೆಯ ಮದುವೆ ಮಾಡಿಕೊಳ್ಳುವ ಇಚ್ಛೆ ನನಗಿರಲಿಲ್ಲ. ಆದರೆ ನಾ ಒಬ್ಬೊಂಟಿಗ, ಗೋಕುಲನನ್ನು ಸಲಹುವುದು ನನ್ನಿಂದ ಸಾಧ್ಯವಿಲ್ಲ ಎಂದು ಮನವರಿಕೆಯಾದಾಗ ಮತ್ತೊಂದು ಮದುವೆಗೆ ಒಪ್ಪಿದೆ. ದೇವರು ನನ್ನ ಅಂತರಂಗ ಅರಿತ, ಒಳ್ಳೆಯ ಹೆಂಡತಿಯನ್ನು ಕೊಟ್ಟ; ನನಗೆಂದೂ ಯಾವ ಕಷ್ಟವೂ ಆಗಲಿಲ್ಲ. ವಿನೋದನೊಬ್ಬ ಈ ಕಡೆಗಾಲದಲ್ಲಿ ದುಃಖ ಕೊಡದಿದ್ದರೆ ನಾ ಆನಂದದಿಂದಲೇ ಹೊರಟುಹೋಗುತ್ತಿದ್ದೆ. "

ಮಾತನಾಡುತ್ತಿದ್ದಂತೆ ಅವನ ಬಾಡಿದ ಕಣ್ಣುಗಳು ಒದ್ದೆಯಾದವು. ಭವಾನಿ ಸೆರಗಿನಿಂದ ಒರಸಿದಳು. ಅವಳ ಕಣ್ಣಲ್ಲಿ ದಳದಳ ನೀರು ಹರಿಯುತ್ತಲಿತ್ತು. ವೈಕುಂಠ ಹೇಳಿದ: "ನಾನಂತೂ ಹೋಗುವೆ. ನಾನಿಲ್ಲದಾಗ ಕಷ್ಟದಿಂದಾರ್ಜಿಸಿದ ಅಂಗಡಿಯನ್ನು ವಿನೋದ ಕೈಗೆ ತೆಗೆದುಕೊಂಡು ಎರಡು ದಿನಗಳಲ್ಲಿಯೇ ಗೊತ್ತಿಗೆ ಹಚ್ಚುವ. ಈ ದುಃಖ ಪರಲೋಕದಲ್ಲಿದ್ದರೂ ನನ್ನನ್ನು ಪೀಡಿಸುವುದು.'' ಸ್ವಲ್ಪ ತಡೆದು ಮತ್ತೆಂದ: "ಇಷ್ಟು ಮಾತ್ರವೊ ? ನಿನಗೆ ನಿಲ್ಲಲೂ ಸ್ಥಳವಿಲ್ಲದಂತಾಗುವುದು. ನಮ್ಮ ಗೋಕುಲ ಕೂಡ ಮಕ್ಕಳು ಮರಿ ಕಟ್ಟಿಕೊಂಡು ಬೀದಿ-ಬಿಕ್ಷುಕ ಆಗಬೇಕಾದೀತು !''

ವೈಕುಂಠ ಭಯದಿಂದ ನಡುಗಿದ. ಈ ದುರ್ಘಟನೆಯನ್ನು ನೆನೆದೊಡನೆ ಅವನ ಎದೆಬಡಿತ ನಿಂತು ಹೋಗತೊಡಗಿತು. ಭವಾನಿ ಗಂಡನ ಮುಖದಲ್ಲಿ

ಮುಖವಿಟ್ಟು ಅಳುತ್ತಳುತ್ತ ನುಡಿದಳು: "ಹಾಂ, ನೀವು ವಿನೋದನಿಗೆ ಏನೂ ಕೊಡಬೇಡಿರಿ. ನೀವು ನೆತ್ತರು ನೀರುಮಾಡಿ ಗಳಿಸಿದುದನ್ನು ನಾ ಯಾರಿಗೂ ಕೊಡುವುದಿಲ್ಲ. ಅಂಗಡಿ, ಮನೆ, ಹಣ ಒಡವೆ ಎಲ್ಲಾ ಗೋಕುಲನಿಗೆ ಬರೆದುಕೊಟ್ಟು ಹೋಗಿರಿ ನೀವು ಶಾಂತರಾಗಿರ್ರಿ, ನಿಶ್ಚಿಂತರಾಗಿರ್ರಿ,— ಅದಕ್ಕೆ ನಾ ಸಾಕ್ಷಿ ಹಾಕುವೆ."

ವೈಕುಂಠ ಕೆಲಹೊತ್ತು ಹೆಂಡತಿಯ ಮುಖ ನೋಡುತ್ತಿದ್ದು ಉಸಿರ್ಗರೆದು ನುಡಿದ: "ಹಗಲಿರುಳೂ ನಾನಿದನ್ನೇ ಯೋಚಿಸುತ್ತಿದ್ದೇನೆ. ಮನಃಪೂರ್ವಕ ದೇವರನ್ನು ಕೂಡ ನೆನೆಯುವುದಾಗಿಲ್ಲ. ಏನು, ನೀ ಇದಕ್ಕೊಪ್ಪುವೆಯಾ?" ಎಂದು ನಿರಾಶೆಯ ನಿಟ್ಟುಸಿರಿಟ್ಟ ಭವಾನಿಯ ಎದೆ ಬಿರಿಯಿತು. ಅವಳು ಅವನ ಎದೆಯ ಮೇಲೆ ಬಿದ್ದು ಗದ್ಗದ ಸ್ವರದಿಂದ ನುಡಿದಳು: "ಹೂಂ, ನಾ ಒಪ್ಪುವೆ. ನಿಮ್ಮನ್ನು ಮುಟ್ಟಿ ಹೇಳುವೆ. ನನಗೇನೂ ಬೇಕಾಗಿಲ್ಲ. ನೀವು ನಿಶ್ಚಿಂತರಾದರೆ ಸಾಕು. ಈ ಸಮಯದಲ್ಲಿ ನಿಮ್ಮ ಮನಸ್ಸಿನಲ್ಲಿ ಯಾವ ಕ್ಷೋಭವೂ ಯಾವ ಕ್ಲೇಶವೂ ಇರಬಾರದು, ಅಷ್ಟೆ."

ವೈಕುಂಠ ಮತ್ತೆ ಕೆಲನಿಮಿಷ ನೀರವವಾಗಿ ಅವಳ ಕಡೆ ನೋಡುತ್ತಿದ್ದು ನಿದಾನವಾಗಿ ಹೇಳಿದ: "ಆದರೆ ವಿನೋದ?"

ಭವಾನಿ ತಟ್ಟನೆ ಉತ್ತರವಿತ್ತಳು: "ಅವನ ಬಗ್ಗೆ ನೀವು ಯೋಚಿಸಬೇಡಿರಿ. ಅವನು ಕಲಿತಿದ್ದಾನೆ, ತನ್ನ ಹಾದಿ ತಾ ಕಂಡುಕೊಳ್ಳುತ್ತಾನೆ. ಅಲ್ಲದೆ, ಅವನೆಷ್ಟೇ ಕೆಟ್ಟವನಿರಲಿ, ಗೋಕುಲ ಅವನನ್ನು ಬಿಡುವುದಿಲ್ಲ; ತನ್ನ ತಮ್ಮನನ್ನು ನೋಡಿಕೊಂಡೇ ನೋಡಿಕೊಳ್ಳುವ."

ವೈಕುಂಠ ಸುಮ್ಮನಾದ. ತೃಪ್ತಿಯಿಂದ ಉಸಿರ್ಗರೆದು ಮಗ್ಗುಲಾದ. ಭವಾನಿ ಕಲ್ಲ ಮೂರ್ತಿಯಂತೆ ಅಲ್ಲಿಯೇ ಕುಳಿತಿದ್ದಳು. ಅತ್ಯಂತ ಅಭಿಮಾನದಿಂದ ಅವಳ ಕಣ್ಣಲ್ಲಿ ನೀರು ಹರಿಯಿತು. ತನ್ನ ಹೊಟ್ಟೆಯಲ್ಲಿಹುಟ್ಟಿದ ಮಗನಲ್ಲಿ ಗಂಡನಿಗೆ ನಂಬಿಗೆಯಿಲ್ಲ. ಅವನು ಕೆಟ್ಟವನೆಂದು ಪುತ್ರೋಚಿತ ಅಧಿಕಾರವನ್ನೂ ಕಸಿದುಕೊಳ್ಳುತ್ತಿದ್ದಾನೆಂಬ ದುಃಖ ಅವಳ ಹೃದಯ

ವನ್ನು ಶಲ್ಯದಂತೆ ಚುಚ್ಚಿ ನೋಯಿಸುತ್ತಿರುವುದನ್ನು ಒಂದಿಷ್ಟೂ ನೋಡಲಿಲ್ಲ. ಅವನು ಕೆಟ್ಟವನಿರಲಿ ಏನೇ ಇರಲಿ, ಅವಳು ತಾಯಿ, ಅವ ಮಗ. ಆ ದೈವಗೇಡಿ ಮಗನ ಕಗ್ಗತ್ತಲೆಯ ಭವಿಷ್ಯ ಕಣ್ಣಿಗೆ ಕಟ್ಟಿ ತಾಯ್ಗರುಳು ಶೋಕಾಕುಲವಾಯಿತು. ಆದರೆ ತಿರುಗಿ ಪರಿತ್ರಾಣ ಹೊಂದುವ ದಾರಿ ಬೇರೆ ಅವಳಿಗೆ ಕಾಣಲಿಲ್ಲ. ಸಾಯುತ್ತಿರುವ ಗಂಡನ ತೃಪ್ತಿಗಾಗಿ ಅವಳಾಗಿ ಮಗನ ಸರ್ವನಾಶದ ಹಾದಿ ತೋರಿಸಿದ್ದಾಳೆ. ಆ ಹಾದಿಯನ್ನು ಕಟ್ಟಲು ಯಾರು ಬರುವರು ?

ಅಂದೇ ಇಳಿಹೊತ್ತಿನಲ್ಲಿ ವಕೀಲರನ್ನು ಕರೆಸಿ ರೀತಿಯಂತೆ ಮೃತ್ಯುಪತ್ರ ಬರೆಸಿಯಾಯಿತು. ವೈಕುಂಠ ಸ್ಥಾವರ ಜಂಗಮ ಆಸ್ತಿಯನ್ನೆಲ್ಲಾ ಹಿರಿಯಮಗನಿಗೆ ಕೊಟ್ಟುಬಿಟ್ಟ. ಅದಕ್ಕೆ ಭವಾನಿಯು ಸಾಕ್ಷಿ! ಅವಳ ಕೈ ನಡುಗಿತು. ಮಾತೃಸ್ನೇಹ ಎಲ್ಲಿಯೋ ಅದೃಶ್ಯವಾಗಿ ಕುಳಿತು, ಅಡಿಗಡಿಗೆ ಅವಳ ಕೈಯನ್ನು ತಡೆಯುತ್ತಿತ್ತು; ಆದರೆ ಪರಾವೃತ್ತಗೊಳಿಸಲಿಲ್ಲ. ಪತಿ-ಚರಣಗಳನ್ನು ಹೃದಯದಲ್ಲಿ ನೆಲೆಗೊಳಿಸಿಕೊಂಡು ಸೊಟ್ಟಸೊಟ್ಟ ಅಕ್ಷರಗಳಿಂದ ಅಂಕಿತವಿಕ್ಕಿದಳು. ವಿನೋದನಿಗೆ ಯಾವುದೂ ತಿಳಿಯಲಿಲ್ಲ. ಈ ಸಮಯದಲ್ಲಿ ಅವನು ಕಲಕತ್ತೆಯ ಒಂದು ಹೊಲಸು ಬೀದಿಯಲ್ಲಿ, ಅದಕ್ಕೂ ಹೊಲಸು ಸಂಗಡಿಗರೊಡನೆ ಮದ್ಯಪಾನ ಮಾಡಿ ಮತ್ತನಾಗಿ ಬಿದ್ದಿದ್ದ. ಅವನನ್ನು ಕರೆಯ ಹೋಗಿದ್ದ ಇಬ್ಬರು ಅವನ ವಾಸಸ್ಥಳದಲ್ಲಿ ಎರಡು ದಿನ ವ್ಯರ್ಥ ಹಾದಿ ನೋಡಿ ತಿರುಗಿ ಬಂದರು. ಈ ಸುದ್ದಿಯನ್ನು ವೈಕುಂಠನಿಗೆ ಹೇಳುವ ಸಾಹಸ ಯಾರಿಗೂ ಆಗಲಿಲ್ಲ. ಅವನೂ ಪ್ರಶ್ನಿಸಲಿಲ್ಲ. ಆದರೂ ಅವನಿಗೆ ಯಾವ ವಿಷಯವೂ ತಿಳಿಯದುಳಿಯಲಿಲ್ಲ

ಎರಡು ದಿನಗಳಾದವು. ಮೂರನೆಯ ದಿನ ಮುಂಜಾನೆಯೇ ವೈಕುಂಠನಿಗೆ ಉಸಿರಾಡಿಸುವುದು ಕಷ್ಟವಾಗುತ್ತ ಬಂತು. ಹಗಲೆಲ್ಲ ಎಚ್ಚರಿಲ್ಲದೆ ಬಿದ್ದಿದ್ದು ಸಂಜೆಗೆ ಕಣ್ಣು ಬಿಟ್ಟ. ಭವಾನಿ ತಲೆಗಿಂಬುದೆಶೆಯಲ್ಲಿ ಕುಳಿತಿದ್ದಳು, ಗೋಕುಲ ಕಾಲುದೆಸೆಯಲ್ಲಿ ಕುಳಿತಿದ್ದ. ಅವನನ್ನು

ಸನ್ನೆಯಿಂದ ಹತ್ತಿರ ಕರೆದು ಅತ್ಯಂತ ಕ್ಷೀಣ ಸ್ವರದಿಂದ ವೈಕುಂಠ ನುಡಿದ: “ ವಿನೋದನಿಗೆ ಸುದ್ದಿ ತಿಳಿದಿಲ್ಲವೆಂದು ಕಾಣುತ್ತದೆ, ಗೋಕುಲ, ಇಲ್ಲದಿದ್ದರೆ ಅವನು ಬಂದೇ ಬರುತ್ತಿದ್ದ. ”

ಮಾತಾಡುತ್ತಿದ್ದಂತೆ ಅವನ ಕಣ್ಕೊನೆಯಿಂದ ಕಣ್ಣೀರ ಒಂದು ಹನಿ ತಟಕಿತು. ಈ ಕೆಲ ದಿನ ಅವನೆಂದೂ ವಿನೋದನ ಹೆಸರೆತ್ತಿರಲಿಲ್ಲ. ಕೊನೆಯ ಕ್ಷಣದಲ್ಲಿ ಒಮ್ಮೆಲೇ ಪತಿಯ ಮುಖದಿಂದ ಮಗನ ಹೆಸರು ಕೇಳಿ, ಭವಾನಿಗೆ ಧಿಕ್ಕಾರದಿಂದ ವೇದನೆಯಿಂದ ಎದೆ ಒಡೆಯುವಂತಾಯಿತು. ಆದರೆ ಅವಳು ಹಾಗೆಯೇ ನೀರವವಾಗಿ ಅಧೋಮುಖಿಯಾಗಿ ಕುಳಿತಿದ್ದಳು. ಗೋಕುಲ ತಂದೆಯ ಕಣ್ಣೊರಸಿದ. ತಂದೆ ಮತ್ತೆ ಮಾತನಾಡಿದ:

“ ಇನ್ನು ಅವನನ್ನು ನನ್ನ ಕಣ್ಣೇನು ಕಾಣುವುದಿಲ್ಲ. ನನ್ನ ಹರಕೆ ಹೇಳು. ಒಂದಿನ ಅವನು ಉತ್ತಮನಾಗುವ. ಇಂಥ ತಾಯ ಹೊಟ್ಟೆಯಲ್ಲಿ ಹುಟ್ಟಿದವ ಬಹಳ ದಿನ ಹೀಗಿರಲಾರ. ಆಗ ನೀ ನಿನ್ನ ತಮ್ಮನನ್ನು ತಳ್ಳಲಾಗದು. ಈಕೆ ನಿನ್ನ ತಾಯಿ; ಇಂಥ ತಾಯಿ ಲಭಿಸುವುದಕ್ಕೆ ಅನೇಕ ಪುಣ್ಯ ಬೇಕು. ”

ಗೋಕುಲ ಮಗುವಿನಂತೆ ಅಳುತ್ತ ಹೇಳಿದ: “ ಅಪ್ಪಾ, ನನ್ನ ತಾಯಿಯಂತೂ ನನ್ನ ತಾಯಿಯೆ. ಆದರೆ ವಿನೋದನಿಗೆ ಅರ್ಧ ಪಾಲು ಕೊಟ್ಟು ಹೋಗಿರಿ. ”

“ ಇಲ್ಲ ಗೋಕುಲ. ಬಹಳ ಕಷ್ಟದಿಂದ ಗಳಿಸಿದ ಸಂಪತ್ತಿ ನಷ್ಟವಾಗುವುದನ್ನು ಕಂಡು ಪರಲೋಕದಲ್ಲಿದ್ದರೂ ನನ್ನ ಹೃದಯಕ್ಕೆ ಅಲಗು ನಟ್ಟಂತಾಗುವುದು. ಅದು ನನಗೆ ಸಹಿಸದು. ” ಎಂದು ವೈಕುಂಠ ಬಹಳ ಹೊತ್ತಿನ ತನಕ ಮಗನ ಮೋರೆ ನೋಡುತ್ತಿದ್ದು, ಮನಸಿನೊಳಗೇ ಕೊನೆಯ ಹರಕೆ ಹರಸಿ ಕಣ್ಣು ಮುಚ್ಚಿದ. ಗೋಕುಲ ಕಾಲ ಮೇಲೆ ಬಿದ್ದು ಬಿಕ್ಕಿ ಬಿಕ್ಕಿ ಅಳತೊಡಗಿದ. ವೈಕುಂಠ ಬಹು ಪ್ರಯಾಸದಿಂದ ಮಗ್ಗಲು ಹೊರಳಿ

ತೀರ ಕ್ಷೀಣಸ್ವರದಲ್ಲಿ " ಇಕಾ, ಈ ಹುಡುಗರದು ನಿನಗೊಪ್ಪಿತು. ನಾನಿನ್ನು ಹೋಗುವೆ" ಎಂದು ಸತಿಗೆ ಹೇಳಿದ.

ಮುಂದೆ ವೈಕುಂಠ ಮಾತನಾಡಲಿಲ್ಲ. ಮರುದಿನ ಸೂರ್ಯೋದಯಕ್ಕೆ ಜೀವ ಹೊರಟುಹೋಯಿತು. ಜನ ಬಗೆಬಗೆಯಾಗಿ ಮಾತನಾಡಿಕೊಂಡರು: ವೈಕುಂಠ ಪಕ್ಕಾ ವ್ಯಾಪಾರಿ. ಆದರೆ ಸರಳ ಮನುಷ್ಯ. ವಿಶೇಷತಃ ಅತ್ಯಂತ ದೀನಾವಸ್ಥೆಯಿಂದ ಮೇಲೆದ್ದವನಾದುದರಿಂದ ಅವನಿಗೆ ಶತ್ರುಮಿತ್ರರಿಬ್ಬರೂ ಅನೇಕರಿದ್ದರು. ಮಿತ್ರ ಪಕ್ಷದವರು ಅತಿಶಯೋಕ್ತಿಯ ಗುಣಗಾನ ಮಾಡಿದರೆ ಶತ್ರು ಪಕ್ಷದವರೂ ಹೀಯಾಳಿಸುವುದರಲ್ಲಿ ಕೊರತೆ ತೋರಿಸಲಿಲ್ಲ. ಜೀನ ಹಂಕನೆಂದು, ದಾಕ್ಷಿಣ್ಯ ಇಲ್ಲದವನೆಂದು, ಕೊನೆಗೆ ಅವನ ಗಡುತರ ಬೆರಳನ್ನು ಕದಳೀ ಕಾಂಡಕ್ಕೆ ಹೋಲಿಸಿ ಅವರು ಆತ್ಮತೃಪ್ತಿ ಮಾಡಿಕೊಂಡರು. ಆದರೂ ಒಂದು ತುಚ್ಛ ಗುಣವನ್ನು—ಏನೇ ಇರಲಿ, ಮನುಷ್ಯ ಹಾಕಾಪತಿಯಲ್ಲ, ತನಗೆ ನ್ಯಾಯವಾಗಿ ಬರುವುದಕ್ಕಿಂತ ಒಂದು ತಾಮ್ರದ ಕಾಸನ್ನೂ ಹೆಚ್ಚಿಗೆ ತಕ್ಕೊಂಡಿಲ್ಲ ಎಂಬುದನ್ನು—ಅವರು ಒಪ್ಪದಿರಲಿಲ್ಲ. ವ್ಯವಹಾರ ವಿಷಯದಲ್ಲಿ ಅವನು ಹಿರಿಯ ಮಗನಿಗೆ ಕಲಿಸಿದುದು ಹೆಚ್ಚಾಗಿ ಈ ವಿದ್ಯೆಯೆ.

೪

ವಿನೋದನಿಗೆ ಪಾಲು ಸಿಕ್ಕಲಿಲ್ಲವೆಂಬುದು ಗೊತ್ತಾದ ಕೂಡಲೆ, ಓಣಿಯ ನಾಲ್ಕು ಜನ ಕೈಲಿ ವೆಚ್ಚಮಾಡಿಕೊಂಡು ಕಲಕತ್ತೆಗೆ ಹೋಗಿ ಅವನನ್ನು ಹುಡುಕಿದರು. ಬಳಿಕ ಯಾವ ವಿಷಯವೂ ಗುಪ್ತವಾಗುಳಿಯಲಿಲ್ಲ. ಅವರು ತಿರುಗಿ ಬಂದು ವಿನೋದನ ಸಂಬಂಧವಾಗಿ— ಅವನ ವಿಳಾಸ, ಅವನ ಇರುವಿಕೆ, ಅವನು ಮಾಡುವ ಕೆಲಸ ಎಲ್ಲವನ್ನೂ ತಿಳಿಸಿದರು. ಆಶ್ಚರ್ಯವೆಂದರೆ, ಕೃತಘ್ನನಾದ ಗೋಕುಲ ಅವರ ಆ

ಉಪಕಾರವನ್ನು ಅಂಗೀಕರಿಸಲಿಲ್ಲ. ಅವನು ಸಿಡುಕಿನಿಂದ "ಸುಳ್ಳು ನನ್ನ ಮಕ್ಕಳು ಎಲ್ಲಾ. ಹೊಟ್ಟೆಕಿಚ್ಚಿಗೆ ಈ ರೀತಿ ಹರಲಿ ಮಾಡುತ್ತಾರೆ" ಎಂದುಬಿಟ್ಟ.

ಮುಪ್ಪಿನ ಮುದುಕ ಬನರ್ಜಿ ಮಹಾಶಯರು ಒಮ್ಮೆಲೆ ಅತ್ತುಬಿಟ್ಟು, ಕೊನೆಗೆ ಪ್ರಯಾಸದಿಂದ ಅಳು ಹತ್ತಿಟ್ಟು "ತಮ್ಮಾ ಗೋಕುಲಾ ನನ್ನ ಹಾರಾಣ ಮೂರುದಿನ ಹಗಲೂ ರಾತ್ರಿ ಊಟನಿದ್ದೆಯಿಲ್ಲದೆ ಕಲಕತ್ತೆಯಲ್ಲಿ ಬೀದಿ ಬೀದಿ ತಿರುಗಿ, ೨೫-೩೦ ರೂಪಾಯಿ ವೆಚ್ಚಮಾಡಿ ಆ ಹುಡುಗ ಎಲ್ಲಿದ್ದಾನೆಂಬುದನ್ನು ಗೊತ್ತು ಹಚ್ಚಿದ್ದಾನೆ. ಇಲ್ಲದಿದ್ದರೆ ಅವನನ್ನು ಹುಡುಕುವುದು ಯಾರಿಗೆ ಸಾಧ್ಯವಿತ್ತು!" ಎಂದರು.

ಗೋಕುಲ ರುಕ್ಷಸ್ವರದಿಂದ ಉತ್ತರವಿತ್ತ: "ನಾನೇನೂ ಹಣ ವೆಚ್ಚ ಮಾಡಲು ಹೇಳಿರಲಿಲ್ಲ ಮಹಾಶಯ."

ಬನರ್ಜಿ ಅವಾಕ್ಕಾದರು. "ಇದೇನು ಮಾತು ಗೋಕುಲ! ನಾವು ನಿಮಗೆ ಮನೆಯವರಿದ್ದಹಾಗೆ. ಎಲ್ಲರೂ ಸುಮ್ಮನಿರಬಹುದು; ನಾವು ಹೇಗೆ ಇರಲಿಕ್ಕಾಗುತ್ತದೆ?" ಎಂದರು.

"ಒಳ್ಳೆಯದೊಳ್ಳೆಯದು, ನಿಮ್ಮ ಕೆಲಸಕ್ಕೆ ಹೋಗಿರಿ" ಎಂದು ಅತ್ಯಂತ ಅಶಿಷ್ಟರೀತಿಯಿಂದ ಬೇರೆ ಕಡೆ ಹೊರಟುಹೋದ. ಒಂದು ಎರಡು ಎಂತ: ದಿನಗಳು ಹೋಗತೊಡಗಿದವು. ವಿನೋದ ಮಾತ್ರ ಬರಲಿಲ್ಲ. ಶಾಂತ ಪ್ರಕೃತಿಯ ಗೋಕುಲ ಒಮ್ಮೆಲೆ ಉಗ್ರನಾದ.

ಈ ಕೆಲ ದಿನಗಳಲ್ಲಿ ಭವಾನಿ ಗುರುತು ಸಿಕ್ಕದಂತಾಗಿದ್ದಾಳೆ. ನೀರವವಾಗಿ ಶ್ರಾದ್ಧದ ಕೆಲಸದಲ್ಲಿ ತೊಡಗಿದ್ದಾಳೆ. ಮಗನ ಹೆಸರು ಉಚ್ಚರಿಸುವುದಿಲ್ಲ ಕೂಡ.

ಇತ್ತ ವಿನೋದ ನಾನಾ ನೆವ ಹೇಳಿ ವರ್ಷವೆಲ್ಲ ಗೋಕುಲನಿಂದ ಹಣ ತರಿಸಿಕೊಳ್ಳುತ್ತಿದ್ದ. ಗೋಕುಲನ ಹೆಂಡತಿ ಮನೋರಮೆ ಇದರ ಕಾರಣ ಮೊದಲೇ ಅನುಮಾನಿಸಿ ಗಂಡನನ್ನು ಎಚ್ಚರಿಸುತ್ತಿದ್ದಳು. ಅವನು ಕಿವಿ

ಗೊಟ್ಟಿರಲಿಲ್ಲ. ಇಂದು ಮುಂಜಾನೆ ಆ ಪ್ರಸ್ತಾಪ ತೆಗೆಯುತ್ತಲೆ ಗೋಕುಲ ಕಿಡಿಕಿಡಿಯಾದ. "ವಿನೋದ ಯಾರಪ್ಪನದಾದರೂ ಗಂಟು ಹಾಳು ಮಾಡು ತ್ತಿದ್ದರೆ, ಅವರು ಬಂದು ಹೀಗೆ ಹೇಳಲಿ" ಎಂದು ಭರ್ರನೆ ಮಲತಾಯಿಯ ಕೋಣೆಯ ಎದುರು ಬಂದು ಗಡುಸುದನಿಯಿಂದ ಎಂದ: "ಅಂಥ ದೊಡ್ಡ ರಾವಣರಾಜನೇ ಹೆಂಗುಸರ ಮಾತುಕೇಳಿ ನಿರ್ಮೂಲ ಆದ; ನಮ್ಮಂಥವರ ದೇನು! ನೀನು ಅಪ್ಪನ ಕಿವಿಯಲ್ಲಿ ಪಿಸಿಪಿಸಿ ಉಯಿಲಿನ ಮಂತ್ರ ಹೇಳಿದೆ ಯಮ್ಮಾ, ನನ್ನನ್ನು ಸರ್ವರೀತಿಯಿಂದಲೂ ಹಾಳು ಮಾಡಿದೆ!"

ಭವಾನಿ ಆಶ್ಚರ್ಯದಿಂದ ಮುಖವೆತ್ತುತ್ತಲೆ, ಅವನು ಸಿಟ್ಟುಸಿಟ್ಟಿ ನಿಂದ ಕೈತಿರುವುತ್ತ ಹೇಳಿದ: "ನೀನು ಒಳ್ಳೆಯ ಮನುಷ್ಯಳೆಂದುಕೊಂಡಿದ್ದೆ. ಅಮ್ಮಾ, ನೀನು ಕಡಿಮೆಯವಳಲ್ಲ. ಹೆಂಗುಸರ ಜಾತಿಯೇ ಇಂತಹದು!" ಎಂದು ಅವಳಿಗೆ ಹುಣ್ಣಿನ ಮೇಲೆ ಬರೆಕೊಟ್ಟು ಹೇಗೆ ಬಂದಿದ್ದನೋ ಹಾಗೆಯೇ ತಿರುಗಿಹೋದ.

ಮೊದಲೆ ಅಂಗಡಿಕಾರ, ಮೇಲೆ ಮೂರ್ಖ, ಗೋಕುಲನ ಮಾತೇ ಹೀಗೆ ಎಂದು ಎಲ್ಲರೂ ಬಲ್ಲರು. ವಿಶೇಷತಃ ಸಿಟ್ಟು ಬಂತೆಂದರೆ ಅವನ ಬಾಯಿಗೆ ಹಿಡಿತವೇ ಇಲ್ಲವೆಂಬುದನ್ನು ಅರಿಯದವರಿಲ್ಲ. ಇತ್ತೀಚೆಗೆ ಅವನ ಮಾತು ಎಲ್ಲೆಕಟ್ಟು ಮೀರಿರುವುದೆಂದು ಮನೆಯವರಿಗೆ ಎಲ್ಲರಿಗೂ ಎನಿಸ ತೊಡಗಿತ್ತು.

ಇಳಿಹೊತ್ತಿನಲ್ಲಿ ಮಲಗೆದ್ದು ಬನರ್ಜಿ ಮಹಾಶಯರು ಮುಖ ತೊಳೆಯುತ್ತಿದ್ದರು. ಗೋಕುಲ ಅಲ್ಲಿಗೆ ಹೋದ. ಆ ದಿನ ಅಪಮಾನ ಮಾಡಿದ್ದರೂ ಅವನು ಎಷ್ಟೆಂದರೂ ದೊಡ್ಡಮನುಷ್ಯ. ಪಕ್ಕನೆ ಕಂಡು ಬನರ್ಜಿಯವರು ಗಡಿಬಡಿಸಿ ಎದ್ದರು. ಗೋಕುಲ ಮೂರು ನೋಟು ಅವರ ಕಾಲ ಬಳಿ ಇಟ್ಟು, ಮ್ಲಾನವದನದಿಂದ ವಿನಯದಿಂದ ನುಡಿದ: "ಮಾಸ್ತರ್ ಮಹಾಶಯರೆ ಹಾರಾಣನ ಅಂದಿನ ವೆಚ್ಚ ಕೊಡಲಿಕ್ಕೆ ಬಂದೆ"

“ ಇರಲಿರಲಿ, ಇದೇನಿಷ್ಟು ಗಡಿಬಿಡಿಯಿದ್ದಿತು? ನಿಮ್ಮದನ್ನೇ ಉಣ್ಣುತ್ತೇನೆ, ಉಡುತ್ತೇನೆ” ಎನ್ನುತ್ತ ಬನರ್ಜಿ ಮಹಾಶಯರು ನೋಟು ಎತ್ತಿ ಕೊಂಡರು.

ಗೋಕುಲನಿಗೆ ಕಂಬನಿ ಉಕ್ಕಿತು. ಉತ್ತರೀಯದ ಸೆರಗಿನಿಂದ ಒರಸಿಕೊಂಡು, “ಏನು ಮಾಸ್ತರರೇ ವಿನೋದ ಇನ್ನೂ ಬರಲೇ ಇಲ್ಲ. ಹಾರಾಣನನ್ನುಕರೆದುಕೊಂಡುನಾನೇ ಈಹೊತ್ತು ಹೋಗುತ್ತೇನೆ.” ಎಂದ.

ಬನರ್ಜಿ ಮಹಾಶಯರು ಮೈಯೆಲ್ಲವನ್ನು ತೀವ್ರವಾಗಿ ತೂಗುತ್ತ ನುಡಿದರು: “ ಛಿ ಛಿ, ಉಂಟೆ? ನಮ್ಮ ಹಾರಾಣ ಇರಲಿಕ್ಕೆ ನೀವಲ್ಲಿ ಹೋಗುವುದೆ? ಉಂಹೂ, ಅದಾಗದು. ನಾ ನಾಳೆಯೇ ಅವನನ್ನು ಕಳಿಸುತ್ತೇನೆ.”

ಗೋಕುಲ ಅಡ್ಡಗೋಣು ಹಾಕಿ “ ಬೇಡ ಮಾಸ್ತರರೇ, ನಾ ಹೋಗದಿದ್ದರೆ ನಡೆಯದು. ಅವನು ಬಲು ಅಭಿಮಾನಿ. ಉಯಿಲಿನ ಸುದ್ದಿ ಕೇಳಿಯೇ ಅಭಿಮಾನದಿಂದ ಬಂದಿಲ್ಲ; ನನ್ನ ಬಾಯಿಂದ ಕೇಳದೆ ಅವನು ಯಾರನ್ನೂ ನಂಬುವುದಿಲ್ಲ. ತಾಯಿ ತಂದೆ ಸರ್ವನಾಶ ಮಾಡಿಬಿಟ್ಟರು! ” ಎಂದು ಗೋಕುಲ ಒಮ್ಮೆಲೆ ಆರ್ತಸ್ವರದಿಂದ ಅತ್ತುಬಿಟ್ಟ.

ಬನರ್ಜಿ ಮಹಾಶಯರು ಅವನನ್ನು ಪರಿಪರಿಯಿಂದ ಸಂತಯಿಸಿ, ಈ ಸ್ಥಿತಿಯಲ್ಲಿ ನೀವು ಹೋಗುವುದು ತಕ್ಕುದಲ್ಲವೆಂದು ಹೇಳಿ, ನಾಳೆಯೇ ಹಾರಾಣ ಹೋಗಿ ಅವನನ್ನು ಕರೆದುಕೊಂಡೇ ಬರುವನೆಂದು ಬಾರಿ ಬಾರಿಗೂ ಭರವಸೆಯಿತ್ತರು. ಗೋಕುಲ ನಿರುಪಾಯನಾಗಿ ಹಾರಾಣನ ವೆಚ್ಚಕ್ಕಾಗಿ ಮತ್ತೈದು ನೋಟು ಕೊಟ್ಟು ಮನೆಗೆ ಮರಳಿದ.

## ೫.

ಜಯಲಾಲ ಮಾಸ್ತರರಿಗೆ ಗುಟ್ಟಿನಲ್ಲಿ ಎಂಬತ್ತು ರೂಪಾಯಿ ಗೋಕುಲ ಲಂಚ ಕೊಟ್ಟನೆಂದು ಊರಲ್ಲಿ ಸುದ್ದಿಯಾಯಿತು. ಆಗ ಅನೇ

ಕರು ಅವನನ್ನು 'ಎಂಥ ದಡ್ಡ' ಎಂದರು. ಇವನೇನೋ ವಿನೋದನಿಗಾಗಿ ಚಡಪಡಿಸುತ್ತಾನೆ, ಅವನು ಮಾತ್ರ ಇವನನ್ನು ಕಣ್ಣೆತ್ತಿಯೂ ನೋಡುವುದಿಲ್ಲ ಎಂಬ ಅಭಿಪ್ರಾಯವನ್ನು ಮನೆಯವರೆಲ್ಲರ ದೃಷ್ಟಿ-ಮುಖ ಭಾವಗಳಲ್ಲಿ ಕಂಡು ಗೋಕುಲ ಒಳಗೊಳಗೆ ಕುಗ್ಗಿದ.

ಮನೆಯ ಬಂಡಿ ಹತ್ತನೆಯ ಬಾರಿ ಚುಂಚುಡಾ ಸ್ಟೇಶನಿಗೆ ಹೋಗಿ ತಿರುಗಿಬಂದಿತು. ಗೋಕುಲ ತಿರಸ್ಕಾರದಿಂದ ಬಂಡಿಯವನನ್ನು ಕೇಳಿದ: "ಇನ್ನೇನು ಕಲಕತ್ತೆಯ ಗಾಡಿಗಳೇ ಇದ್ದಿಲ್ಲವೋ, ತಿರುಗಿ ಬಂದು ಬಿಟ್ಟೆ? ಹೋಗು ಹೋಗು ಮಲಗು ಹೋಗು!"

ಅವನು ವಿನಯದಿಂದ ಹೇಳಿದ: 'ಇನ್ನೂ ಎರಡು ಗಾಡಿ ಇದ್ದವು. ಆದರೆ ಕುದುರೆಗೆ ದಾಣಿ-ನೀರು ಆಗಿರಲಿಲ್ಲ, ಅದಕ್ಕೆ ಬಂದೆ."

ಗೋಕುಲ ತಕ್ಷಣ ಸಪ್ತಮಕ್ಕೇರಿಸಿ ಗದರಿದ: "ಚಿಕ್ಕಬಾಬು ಇಷ್ಟುಮಿಷ್ಟು ತಿಂದುಬಗುತ್ತಾರೇನೋ ಅಲ್ಲವೆ? ಈ ಮಗನ ಅರಸುಗುದುರೆ ಒಂದು ಗಳಿಗೆಯೊಳಗೆ ದಾಣಿಸೀರಿಲ್ಲದೆ ಸತ್ತು ಹೋಗುತ್ತಿತ್ತೇನೋ! ನಡೆ, ಈಗಲೇ ಹೊಡೆದುಕೊಂಡು ನಡೆ."

ಬಂಡಿಯವ ಒಡೆಯನ ಮನದಿಂಗಿತ ತಿಳಿಯದೆ, ಅಂಜಂಜುತ್ತ ಮುಜುರೆ ಮಾಡಿ ಹೊರಟುಹೋದ.

ರಸಿಕ ಚಕ್ರವರ್ತಿ ಹಳೆಯ ಕರಣಿಕ. ಮನೆಯೊಳಗೆ ಅವನಲ್ಲಿ ಎಲ್ಲರಿಗೂ ಆದರ. ಅವನೆಂದ: "ಚಿಕ್ಕಬಾಬು ಬಂದರೆ ಗಾಡಿ ಬಾಡಿಗೆ ಮಾಡಿಕೊಂಡು ಬರುವರು. ಅದಕ್ಕೆ ಇಷ್ಟೇಕೆ ಚಡಪಡಿಕೆ ದೊಡ್ಡ ಬಾಬೂ ?"

ರಸಿಕ ಹತ್ತಿರವೇ ಇದ್ದುದನ್ನು ಗೋಕುಲ ನೋಡಿರಲಿಲ್ಲ. ಅವನು ಅಪ್ರತಿಭನಾಗಿ "ಆ ಹತಭಾಗ್ಯನಿಗಾಗಿ ನಾನು ಚಡಪಡಿಸುವೆನೆ? ನೀನೇ ನೆನ್ನುತ್ತೀ ಚಕ್ರೊತ್ತಿ ಮಶಾಯಿ? ಮನೆಯೊಳಗೆ ಹೆಂಗುಸರು ಹೀಗೆ ಅತ್ತು

ರಣಕತ್ತಲ ಮಾಡದಿದ್ದರೆ ನಾನೇನು ಅವನನ್ನು ಒಳಗೆ ಕಾಲು ಹಾಕಗೊಡು ತ್ತಿರಲಿಲ್ಲ. ನಾ ಸಿಟ್ಟಿಗೆದ್ದರೆ ಆ ಕುಪುತ್ರ— ಹಾಂ.'' ಎಂದ.

ರಸಿಕನಿಗೆ ತಿಳಿಯದಿದ್ದುದು ಯಾವುದೂ ಇರಲಿಲ್ಲ. ಮನೆಯ ಹೆಂಗು ಸರು ವಿನೋದನ ದರ್ಶನವಿಲ್ಲದ್ದಕ್ಕೆ ಒಂದಿನವೂ ಕಣ್ಣೀರಿಟ್ಟಿಲ್ಲವೆಂದು ಅವನಿಗೆ ಗೊತ್ತು. ಆದರೆ ಅದನ್ನೆತ್ತಿ ಅವನು ವಾದಿಸಲಿಲ್ಲ.

ತಂದೆಯ ಶ್ರಾದ್ಧ ಒಳ್ಳೆಯ ಸಮಾರೋಹದಿಂದ ಆಗುವುದು. ಗೋಕುಲ ಅದರಲ್ಲಿ ಮಗ್ನನಾಗಿದ್ದಾನೆ. ಆದರೆ ಅವನ ಕಿವಿಗಳು ಗಾಲಿಯ ಸಪ್ಪಳದ ಕಡೆಗೇ. ಒಂದೆರಡು ಗಂಟೆಗಳ ತರುವಾಯ ದೂರದಲ್ಲಿ ದೊಡ್ಡ ಬಂಡಿಯೊಂದು ಬರುವುದು ಕಂಡು ಒಬ್ಬ ಆಳನ್ನು ಕರೆಸಿ ಹೇಳಿದ: ''ಎಲೇ, ಹೋಗಿ ನೋಡೋ, ಬಂಡಿ ನಮ್ಮದೋ ಏನೋ. ಎರಡೂ ಕುದುರೆಗಳನ್ನು ಹೊಡೆದು ಹಣ್ಣು ಮಾಡಿದ್ದನೆಂದು, ಸಿಟ್ಟಿನಲ್ಲಿ ಒಂದೆರಡು ಮಾತನಾಡಿದೆ; ಅದನ್ನೇ ಅವ ನಿಜವೆಂದು ತಿಳಿದು ಮತ್ತೆ ಸ್ಟೇಶನಿಗೆ ಹೋಗಿದ್ದಾನೋ! ಗುಣವಂತ ತಮ್ಮನಿಗೆ ಮತ್ತೆ ಗಾಡಿ ಕಳಿಸಬೇಕು! ತಾಯಿ ಸಿಟ್ಟಾದಾಳೆಂದು ಕುದುರೆಗಳ ಪ್ರಾಣ ತೆಗೆದುಕೊಳ್ಳಬಾರದು ಎಲ್ಲಿಯಾದರೂ!''

ರಸಿಕ ಕೇಳಿದ. ಹಾಗೆ ಹೀಗೆ ಏನೂ ಹೇಳಲಿಲ್ಲ. ತುಸು ಹೊತ್ತಿ ನಲ್ಲಿ ಬರಿಯ ಬಂಡಿ ಬಂದಿತು. ರಸಿಕನ ಕಡೆ ನೋಡಿ ಒಣನಗೆ ನಕ್ಕು ಗೋಕುಲ ಹೇಳಿದ: '' ಇನ್ನೇನು ನಾ ಸತ್ತರೇ ಸರಿ. ಹೋಗು, ಮನೆಗೆ ಹೋಗಿ ಗೃಹಿಣಿಗೆ ಹೇಳು: ಅವರ ಪಾಸು ಮಾಡಿದ ಮಗನ ಕೀರ್ತಿ! ನಾಳೆ ನಾಡದು ಬಂದನೆಂದರೆ, ಮನೆಯ ಆವಾರದೊಳಗೆ ಬರಗೊಟ್ಟರೆ ನಾ ಗೋಕುಲ ಮಜುಮದಾರನಲ್ಲ. ನಾನೊಮ್ಮೆ ವಕ್ರಿಸಿದೆನೆಂದರೆ, ಬ್ರಹ್ಮ ದೇವರು ಬಿಟ್ಟು ಬ್ರಹ್ಮದೇವರಪ್ಪ ಬಂದು ಹೇಳಿದರೂ ಅವನ ಕಡೆ ನೋಡು ವವನಲ್ಲ, ಹೇಳಿರುತ್ತೇನೆ. ತಾಯಿಗೆ ತಿಳಿಸು: ಚಕ್ರವರ್ತಿ ಮಶಾಯಿ: ಪೃಥ್ವಿ ತಿರುವು ಮುರುವಾದರೂ ಗೋಕುಲನ ಮಾತು ತಪ್ಪಲಾರದು; ಹೊತ್ತಿಗೆ

ಬಂದಿದ್ದರೆ ಏನಾದರೂ ಸಿಗುತ್ತಿತ್ತು. ಇನ್ನೊಂದು ದಮ್ಮಡಿಯೂ ಸಿಗಲಾರದು," ಎಂದು ಧಡ ಧಡ ಒಳಗೆ ಹೊರಟುಹೋದ.

ಯಾರ ಮೇಲೆ ಸಿಟ್ಟಾಗಿ ಗೋಕುಲ ಹೊತ್ತಿಲ್ಲದ ಹೊತ್ತಿನಲ್ಲಿ ಮಲಗಿಬಿಟ್ಟಿದ್ದಾನೆಂಬುದು ಹೆಂಗುಸರಿಗೆ ಗೊತ್ತಾಗಲಿಲ್ಲ. ಹಾಲು ಕುಡಿಯಲು ಹೇಳಹೋದ ದಾಸಿ ಕವಕ್ಕನೆ ಎಸ್ನಿಸಿಕೊಂಡು ಮರಳಿದಳು. ಶ್ರಾದ್ಧ ಬ್ರಾಹ್ಮಣರಿಗೆ ಕೊಡಬೇಕಾದ ದಾನ-ದಕ್ಷಿಣೆಗಳ ವ್ಯವಸ್ಥೆ ಅಂಗಡಿಯ ಕರಣಿಕನಿಗೆ ಒಪ್ಪಿಸಿತ್ತು. ಅವನು ಬಂದು ಏನೋ ವಿಚಾರಿಸಿದ. ಗೋಕುಲ ಭರಕ್ಕನೆ ಎದ್ದು, ಅವನ ಕೈಯೊಳಗಿನ ಕಾಗದ ಕಸಿದುಕೊಂಡು ಚೂರು ಚೂರು ಮಾಡಿ ಒಗೆದು, " ಅಪ್ಪ ಹತ್ತು ತಾಲೂಕು ಜಹಾಗೀರು ಮಾಡಿಟ್ಟು ಹೋಗಿಲ್ಲ, ರಾಜಮಹಾರಾಜರಂತೆ ಬ್ರಾಹ್ಮಣರಿಗೆ ದಾನದಕ್ಷಿಣೆಯೆ ? ಹೋಗಿರಿ ಹೋಗಿರಿ, ಇದೆಲ್ಲ ರಾಜ ಠೀವಿ ನಮ್ಮಲ್ಲಿ ನಡೆಯದು ! " ಎಂದ. ಪಾಪ, ಕರಣಿಕ ಕಕ್ಕಾವಿಕ್ಕಿಯಾಗಿ ಹೊರಟುಹೋದ.

ಇದು ಭವಾನಿಗೆ ಗೊತ್ತಾಗಿ ಕೋಣೆಯ ಹೊರಹೊಸತಿಲಲ್ಲಿ ಬಂದು ಕುಳಿತಳು. ಸ್ನೇಹದಿಂದ, ಮೃದುಕಂಠದಿಂದ, " ನಿನಗೇನು ಜಡ್ಡಾಗಿದೆ ಗೋಕುಲ ? " ಎಂದು ಕೇಳಿದಳು.

ಗೋಕುಲ ಮಲಗಿದ್ದ ಹಾಗೆಯೇ "ಇಲ್ಲ" ಎಂದ.

"ಇಲ್ಲವೆ? ಹಾಗಾದರೆ ಏನೂ ತಿನ್ನಲಿಲ್ಲ, ಈ ಅಡ್ಡಹೊತ್ತಿನೊಳಗೆ ಮಲಗಿಬಿಟ್ಟೆ ?"

ಸುಮ್ಮನಿದ್ದ ಭವಾನಿ ಮತ್ತೆ ಕೇಳಿದಳು: "ಬ್ರಾಹ್ಮಣರಿಗೆ ಕೊಡುವ ದಾನದಕ್ಷಿಣೆಯ ಪಟ್ಟಿ ಹರಿದು ಹಾಕಿದೆಯಾ? ನಾಳೆ ಮುಂಜಾನೆಯೆ ಔತಣ ಕೊಡಬೇಕು— ಇನ್ನು ಅವಕಾಶವಿಲ್ಲ ತಮ್ಮಾ."

"ಇಲ್ಲದಿದ್ದರೆ ಇಲ್ಲ."

ಭವಾನಿಗೆ ಸ್ವಲ್ಪ ವಿಸ್ಮಯ, ಸ್ವಲ್ಪ ನಿರಾಶೆ. ಅವಳೆಂದಳು: " ಛೀ ಗೋಕುಲಾ. ಈ ಹೊತ್ತಿನೊಳಗೆ ಹೀಗೆ ಅಧೀರನಾದರೆ ಹೇಗೆ? ಏನಾಗಿದೆ ನನಗೆ ಬಿಚ್ಚಿ ಹೇಳು. ನಾ ಎಲ್ಲ ಸರಿಮಾಡಿ ಕೊಡುವೆ. "

ಗೋಕುಲ ಕಣ್ಣು ತಿಕ್ಕುತ್ತ ಎದ್ದು ಕುಳಿತ. ಯಾರ ಸಂಗಡ ಹೇಗೆ ಮಾತಾಡಬೇಕೆಂಬುದನ್ನು ಅವನು ಕಲಿತೇ ಇರಲಿಲ್ಲ. ಕರ್ಕಶ ಸ್ವರದಿಂದ ಹೇಳಿದ: "ನಿನ್ನ ಮಾತು ಕೇಳುವವನೊಬ್ಬ ಕತ್ತೆಯೇ ಸರಿ. ಅಪ್ಪ ಕೇಳುತ್ತಿದ್ದನೆಂದು ನಾನೂ ಕೇಳಲೆ? ನಾನು ಹತ್ತುಜನ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಶುದ್ಧನಾಗುವೆ, ಹೆಚ್ಚು ಆಡಂಬರ ಮಾಡುವುದಿಲ್ಲ." ಎಂದು ಅವನು ತತ್‌ಕ್ಷಣವೇ ಗೋಡೆಯ ಕಡೆ ಮೋರೆ ತಿರುವಿ ಮಲಗಿಕೊಂಡ.

ಭವಾನಿ ಶಾಂತಸ್ವರದಿಂದ, "ಛೀ ತಮ್ಮಾ, ಅವರು ಸ್ವರ್ಗಕ್ಕೆ ಹೋಗಿದ್ದಾರೆ. ಅವರಿಗೇಕೆ ಇಂಥ ಮಾತು ಆಡುತ್ತೀ?" ಎಂದಳು ಗೋಕುಲ ಮಾತನಾಡಲಿಲ್ಲ. ಅವಳು ಸ್ವಲ್ಪ ಹೊತ್ತು ಸುಮ್ಮನಿದ್ದು "ಹೀಗೆ ಮಾಡಿದರೆ ಜನರೇನೆಂದಾರು ನೋಡು ಮಗೂ. ಅವರವರ ಯೋಗ್ಯತೆಯಂತೆ ಕೆಲಸ ನಡೆಯಬೇಕು. ಇಲ್ಲದಿದ್ದರೆ ಅಕೀರ್ತಿ!" ಎಂದಳು.

ಗೋಕುಲ ಈ ಕಡೆ ಹೊರಳದೆ, "ಆಗಲಿ. ನಾನೇನು ಯಾರ ಋಣ ತಿಂದಿಲ್ಲ, ಅಂಜಿ ನಡೆಯಲಿಕ್ಕೆ," ಎಂದ.

"ಆದರೆ ಇದರಿಂದ ಅವರಿಗಾವರೂ ತೃಪ್ತಿ ಹೇಗಾದೀತು? ಅವರು ಮಾಡಿಟ್ಟ ಸಂಪತ್ತಿಗೆ ತಕ್ಕಂತೆ ಕೆಲಸವಾಗದಿದ್ದರೆ ಅವರಿಗೆ ಆನಂದವಾಗದು."

ಗೋಕುಲನಿಗೆ ತಂದೆಯ ಮೇಲೆ ಎಷ್ಟು ಪ್ರೀತಿ ಎಂಬುದನ್ನು ಭವಾನಿ ಬಲ್ಲಳು. ಅವಳು ಬೇಕೆಂದೇ ಅವನ ಮರ್ಮಸ್ಥಾನಕ್ಕೆ ಹೊಡೆದಳು. ಗೋಕುಲ ಎದ್ದು ಕುಳಿತು ಅಳುದನಿಯಲ್ಲಿ ಮಾತನಾಡಿದ: "ವೆಚ್ಚದ ವಿಷಯ ಯಾರೆಂದರವ್ವಾ? ನೀ ಬೇಕಾದಷ್ಟು ವೆಚ್ಚ ಮಾಡು. ಆದರೆ ದಿನ ಕಳೆಕಳೆದಂತೆ ನನ್ನ ಕೈಕಾಲೇ ಹೋಗುತ್ತಿವೆ. ವಿನೋದ ಅಭಿಮಾನದಿಂದ ಉದಾಸೀನನಾಗಿ ಹೋದ. ನಾನೊಬ್ಬನೇ ಏನೇನೆಂತ ಮಾಡಲಿ?"

ಎಂದು ಅವನು ಬಿಕ್ಕಿ ಬಿಕ್ಕಿ ಅಳತೊಡಗಿದ. ಭವಾನಿಯೂ ಅತ್ತುಬಿಟ್ಟಳು. ಕೆಲಹೊತ್ತಿನ ಮೇಲೆ ಕಣ್ಣೊರಸಿಕೊಂಡು ಗದ್ಗದಸ್ವರದಿಂದ, "ವಿನೋದನಿಗೆ ಇದು ತಿಳಿದಿದೆಯೆ?'' ಎಂದು ಕೇಳಿದಳು.

"ತಿಳಿಯುದೇನಮ್ಮ?"

"ಯಾರು ಹೇಳಿದರು?"

ಈ ಕೆಟ್ಟ ಮನೆಮಾತನ್ನು ಅವನಿಗೆ ಯಾರು ಹೇಳಿದರೆಂಬುದು ಗೋಕುಲನಿಗೂ ಗೊತ್ತಿಲ್ಲ. ಮಾಸ್ತರ್ ಮಹಾಶಯರ ಮಗ ಹಾರಾಣನ ಬಗ್ಗೆ ಸಂದೇಹ ಮಾತ್ರವಿತ್ತು. ಆದರೂ ಸುದ್ದಿಯೆಲ್ಲ ತಿಳಿದೇ ವಿನೋದ ಅಭಿಮಾನ-ಲಜ್ಜೆಗಳಿಂದ ಮನೆಗೆ ಬರಲೊಲ್ಲನೆಂದು ಅವನು ಖಂಡಿತ ಭಾವಿಸಿದ್ದ. ತಾಯಿಯ ಮುಖದ ಕಡೆ ನೋಡುತ್ತ ಅವನೆಂದ: "ಅವನಿಗೆ ಸುದ್ದಿ ಗೊತ್ತಾಗಿದೆ. ತಂದೆ ಮರಳದ ಪಯಣ ಹೊರಟದ್ದು ಅವನಿಗೆ ತಿಳಿಯದಿದೆಯೆ? ನನ್ನಂತೆಯೇ ಅವನ ಹೊಟ್ಟೆಯೂ ಉರಿಯುದಿದೆಯೆ? ಅವನಿಗೆ ಎಲ್ಲಾ ತಿಳಿದಿದೆ ಅವ್ವಾ, ಎಲ್ಲಾ ತಿಳಿದಿದೆ."

ಕೆಲಹೊತ್ತು ನೀರವವಾಗಿದ್ದು ಬಳಿಕ ಭವಾನಿ ಮಾತನಾಡಿದಳು. ಕೇಳಿ ಗೋಕುಲನಿಗೆ ಆಶ್ಚರ್ಯವಾಯಿತು: ತಾಯಿಯ ಅಶ್ರುಗದ್ಗದ ಸ್ವರ ವಿರಲಿಲ್ಲ; ಅದರೊಳಗೆ ಉತ್ತಾಪವೂ ಇರಲಿಲ್ಲ. ಅವಳು ಸಹಜ ಸ್ವರದಲ್ಲಿ ನುಡಿದಳು: "ಗೋಕುಲ, ಇದು ನಿಜವೇ ಇದ್ದರೆ ಅಂಥ ಬಂಧುವಿಗಾಗಿ ನೀ ವ್ಯಸನ ಹಚ್ಚಿಕೊಳ್ಳಬೇಡ. ನಮ್ಮ ವಂಶದಲ್ಲಿ ಮತ್ತೊಬ್ಬ ಹುಟ್ಟಿಯೇ ಇಲ್ಲವೆಂದು ತಿಳಿ. ಸಿಟ್ಟಿನಿಂದ ತಂದೆ ತಾಯಿಗಳ ಕೊನೆಯ ಕರ್ಮಕ್ಕೂ ಬರದವನ ಸಂಬಂಧ ನಮಗೆ ಬೇಡ."

ಇದಕ್ಕೆ ಏನುತ್ತರ ಕೊಡಬೇಕೆಂಬುದು ಗೋಕುಲನಿಗೆ ತೋಚಲಿಲ್ಲ; ಸುಮ್ಮನಿದ್ದ. ಆದರೆ ಅವನ ಹೆಂಡತಿ ಉತ್ತರವಿತ್ತಳು. ಅವಳು ಬಾಗಿಲ

ಮರೆಗೆ ಕುಳಿತು ಎಲ್ಲ ಕೇಳುತ್ತಲಿದ್ದಳು. ಅಲ್ಲಿಂದಲೇ ಅವಳು ಸ್ಪಷ್ಟವಾಗಿ ಹೇಳಿದಳು: ''ಮಾವನವರು ಇಂಥ ಕೆಲಸ ತಿಳಿದುಕೊಳ್ಳದೆ ಮಾಡಿದರೆ? ಅವರು ಅಂತರ್ಯಾಮಿಯಾಗಿದ್ದರು. ಮೂರು ನಾಲ್ಕುದಿನ ಕಲಕತ್ತೆಯಲ್ಲಿ ಎಷ್ಟು ಹುಡುಕಿದರೂ ಮೈದುನರು ಸಿಕ್ಕಲಿಲ್ಲ, ಆಗಲೇ ಅವರ ಗುಣ ಗೊತ್ತಾಯಿತು. ಅವರು ತಮ್ಮ ಸಂಪತ್ತನ್ನೆಲ್ಲಾ ಕೊಟ್ಟು ಹೋದದ್ದಕ್ಕೆ ನಮಗೆ ಯಾರೂ ತಪ್ಪು ಹೊರಿಸುವಂತಿಲ್ಲ. ನೀವೆಂತಲೇ ತಮ್ಮ ತಮ್ಮ ತಮ್ಮ ಎಂದು ಬಡಕೊಳ್ಳುವಿರಿ. ಮತ್ತೊಬ್ಬರಾಗಿದ್ದರೆ—"

ಮಾತು ಮುಗಿಯಲಿಲ್ಲ. ಮುಂದೆ ಹೇಳುವುದು ಮನೋರಮೆಗೆ ಅಗತ್ಯ ಕಾಣಲಿಲ್ಲ. ಭವಾನಿಗೆ ಮನಸಿನೊಳಗೇ ಭಯಂಕರ ಆಶ್ಚರ್ಯವಾಯಿತು. ಏಕೆಂದರೆ ಹಿರಿಸೊಸೆ ಮಾವ ಇದ್ದಾಗ ಮೊದಲೆಂದೂ ಮಾತನಾಡಲಿಲ್ಲ; ಅತ್ತೆಯೆದುರು ಗಂಡನೊಡನೆ ಮಾತಾಡುತ್ತಿದ್ದಿಲ್ಲ ಕೂಡ. ಈ ಕೆಲದಿನಗಳಲ್ಲಿಯೇ ಇಷ್ಟೊಂದು ಉನ್ನತಿ!

ಮೊದಲು ಗೋಕುಲನೂ ಹತಬುದ್ಧನಾದ. ಮರುಕ್ಷಣವೇ ತೆರೆದ ಬಾಗಿಲಕಡೆ ನೋಡುತ್ತ ಹುಚ್ಚನಂತೆ ಚೀರಾಡಿದ: "ಕೇಳಿದೆಯಾ ಅಮ್ಮ. ಕೇಳು. ಕ್ಷುದ್ರರ ಮಗಳ ಮಾತು ಕೇಳು!''

ಪ್ರತ್ಯುತ್ತರವಾಗಿ ಹಿರಿಸೊಸೆ ಚೀರಿಕೊಳ್ಳಲಿಲ್ಲ ನಿಜ. ಆದರೆ ಮತ್ತಷ್ಟು ಸಬಲಸ್ವರದಿಂದ ಗಂಡನನ್ನುದ್ದೇಶಿಸಿ, "ಇಕಾ, ಏನೆನ್ನುವುದು ನನಗೆನ್ನಿರಿ. ಅಪ್ಪ ಅಜ್ಜನ ಸುತ್ತ ಹೋಗಬೇಡಿರಿ. ನಿಮ್ಮಪ್ಪ ನಮ್ಮಪ್ಪ ಇಬ್ಬರೂ ಅಷ್ಟೆ,'' ಎಂದಳು.

ಉತ್ತರ ಕೊಡುವುದಕ್ಕಾಗಿ ಗೋಕುಲನ ತುಟಿಗಳು ಅದುರಿದವು; ಮಾತು ಹೊರಡಲಿಲ್ಲ. ಅವನ ಕಣ್ಣುಗಳೆರಡೂ ಕೆಂಡ ಕಾರತೊಡಗಿದವು. ಇಷ್ಟೊತ್ತು ಸುಮ್ಮನೆ ಕುಳಿತಿದ್ದ ಭವಾನಿ ಮೃದು ತಿರಸ್ಕಾರ ಸ್ವರದಿಂದ ನುಡಿದಳು: "ಬಹೂ, ನೀ ಮಾತಾಡುವುದು ಅಗತ್ಯವಿಲ್ಲವಮ್ಮಾ; ಹೋಗು, ನಿನ್ನ ಕೆಲಸಕ್ಕೆ ಹೋಗು.''

"ಇಂದಿನ ತನಕ ಎಂದೂ ನಾ ಮಾತಾಡಿಲ್ಲರೆವ್ವಾ. ಆಳು ತೊತ್ತುಗಳಂತೆ ದುಡಿಯುತ್ತ ಬಂದಿದ್ದೇನೆ, ಹಗಲು ರಾತ್ರಿ ದುಡಿದುದುಡಿದೇ ಸಾಯುವೆ. ಆದರಿವರು ಕೂತಾಗ ನಿಂತಾಗ ಉಣ್ಣುವಾಗ ತಿನ್ನುವಾಗ 'ನನ್ನ ತಮ್ಮ ಇದು ಪಾಸಾದ, ಅದು ಪಾಸಾದ' ಎಂದು ಒಂದೇ ಸವನೆ ಹಚ್ಚಿರುತ್ತಾರೆ; ಆ ತಮ್ಮನಾದರೋ ಒಮ್ಮೆಯಾದರೂ ಮನೆಗೆ ಬಂದು ಒಂದೊಳ್ಳೆಯ ಮಾತು ಆಡುವುದಿಲ್ಲ! ಇವರಿಗೇ ಇಷ್ಟೊಂದು ಹೇವ-ನಾಚಿಕೆ ಇದ್ದರೆ, ಮತ್ತೊಬ್ಬರು ಮಾತನಾಡುವುದು ಏನು ಅಗತ್ಯವಿತ್ತು?" ಎಂದು ನುಡಿದು ಸೊಸೆ ಅರಕ್ಷಣವೂ ನಿಲ್ಲದೆ ಧಡಧಡ ಹೋಗಿಬಿಟ್ಟಳು.

ಭವಾನಿ ಸ್ತಂಭಿತಳಾದಳು. ಅವಳಿಷ್ಟು ದಿನ ಹಿರಿಸೊಸೆಯನ್ನುಗುರುತಿಸಿರಲಿಲ್ಲ. ಈಗ ಗುರುತಾಗಿ ಅವಳಿಗೆ ಮಿತಿಮೀರಿದ ದುಃಖವಾಯಿತು; ತಳಮಳವಾಯಿತು.

ಹಿರಿಸೊಸೆ ಪೂರಾ ಹೋಗಲಿಲ್ಲ. ಪಡಸಾಲೆಯೊಳಗೆ ನಿಂತು, ಎಲ್ಲರಿಗೂ ಕೇಳುವಂತೆ ಮತ್ತೆ ಪ್ರಾರಂಭಿಸಿದಳು: "ರಾಶಿ ರಾಶಿ ಹಣ ವ್ಯವಸ್ಥೆಗೊಳಿಸುದಕ್ಕಷ್ಟೇ ಅಣ್ಣ. ನಾನು ನನ್ನಮಾವನ ಬಿ. ಎ., ಎಂ. ಎ. ಪಾಸಾದ ಮಕ್ಕಳನ್ನು ನೋಡಿದ್ದೇನೆ. ಆದರೆ ನಾನಿಷ್ಟುಸಾವಧಾನ ಹೇಳಲು ಹೋದರೆ ಕಾರ ಹತ್ತವುದು ಹಾಂ, ಕಾರ ಹತ್ತಲಿ ಸೀ ಹತ್ತಲಿ, ಆದರೆ ನಮ್ಮ ದುಡ್ಡು ಹೀಗೆ ಅಪವ್ಯಯವಾಗುತ್ತಿದ್ದರೆ, ಬಾಯಿ ಮುಚ್ಚಿಕೊಂಡಿದ್ದು ನಮ್ಮ ಮಕ್ಕಳು ಮರಿಗಳ ಬಾಯಿಗೆ ಗಡ್ಡೆ ಕೊಡಲಾರೆ. ಪೆದ್ದ ಅಣ್ಣನನ್ನು ಕಂಡು ಎಷ್ಟು ಸಾಧ್ಯವೋ ಅಷ್ಟೂ ಠಕ್ಕಿಸಿದ್ದಾನೆ. ಠಕ್ಕಿಸಲಿ, ನನಗೇನು? ಅವರ ಮಕ್ಕಳೇ ದಿಕ್ಕೇಡಿಯಾಗುವವು!" ಇಷ್ಟು ನುಡಿದು ಹಿರಿಸೊಸೆ ಈಗ ಸತ್ಯ ಸತ್ಯವಾಗಿ ಹೊರಟುಹೋದಳು.

ಗೋಕುಲ ಕಾಲಪ್ಪಳಿಸುತ್ತ ಎದ್ದು ನಿಂತ. ಇಲ್ಲದ ಹೆಂಡತಿಯನ್ನು ಕುರಿತು ಗರ್ಜಿಸತೊಡಗಿದ: "ಏನು! ನಾ ಪೆದ್ದನೆ? ಯಾರೆನ್ನುವರು? ಮತ್ತೀ ಸಂಪತ್ತಿ ಯಾರು ಗಳಿಸಿದ್ದು? ನಾನೋ ವಿನೋದನೊ? ನನ್ನ

ಕಣ್ಣೊಳಗೆ ಮಣ್ಣೆರಚಿ ದುಡ್ಡು ಕೆತ್ತಲು ವಿನೋದನ ಅಪ್ಪನಿಗಾದರೂ ಸಾಧ್ಯವೆ? ನಾ ಹಿರಿಯ, ಅವ ಕಿರಿಯ. ಅವ ನಾಲ್ಕು ಪಾಸು ಮಾಡಿರ ಬಹುದು, ನಾ ಹತ್ತು ಪಾಸು ಮಾಡಬಲ್ಲೆ, ತಿಳಿಯಿತೆ? ನಾ ಪೆದ್ದನೆ? ಬಂದಾದರೂ ಬರಲಿ ಕತ್ತು ಹಿಡಿದು ತಳ್ಳಿಸುತ್ತೇನೆ. ಯಾರು ಮನೆಯೊಳ ಗಿಟ್ಟುಕೊಳ್ಳುತ್ತಾರೋ ನೋಡುತ್ತೇನೆ. ”

ಹೀಗೆ ತಾಳ ತಂತು ಇಲ್ಲದೆ ಒದರಾಡಿದ. ಭವಾನಿ ಮೊದಲೂ ಸುಮ್ಮನಿದ್ದಳು, ಈಗಲೂ ಸುಮ್ಮನಿದ್ದಳು ಬಹಳ ಹೊತ್ತಿನತನಕ ಕಲ್ಲಿನ ಹಾಗೆ ಕುಳಿತಿದ್ದು ಕೊನೆಗೆ ನಿದಾನವಾಗಿ ಎದ್ದು ಹೋದಳು.

೬

ಜಗಳವೇನೋ ಆಯಿತು. ಆದರೆ ಅಂದೇ ರಾತ್ರಿ ಹೆಂಡತಿಯೊಡನೆ ಗೋಕುಲನ ಒಡಂಬಡಿಕೆಯಾಗಿದೆಯೆಂಬುದು ಅವನ ಮರುದಿನ ಬೆಳಗಿನ ನಡೆವಳಿಕೆಯಲ್ಲಿಯೇ ಕಂಡು ಬಂದಿತು. ಏಳುತ್ತಲೇ ಅವರಿಬ್ಬರನ್ನು ಕೂಗಿ ಕರೆಯುತ್ತ, ಕೆಲಸ ಒಪ್ಪಿಸುತ್ತ, ಇನ್ನು ಶ್ರಾದ್ಧ ಮೂರೇ ದಿನ ಉಳಿ ಯಿತೆಂದು ಮನೆಮಂದಿಯನ್ನು ಮತ್ತೆ ಮತ್ತೆ ಎಚ್ಚರಿಸುತ್ತ ಓಡಾಡ ತೊಡ ಗಿದ. ಮಂದಿ ಯಾರಾದರೂ ವಿನೋದನ ವಿಷಯವಾಗಿ ಕೇಳಿದರೆ ಕಿವಿ ಯೊಳಗೆ ಬಟ್ಟಿಟ್ಟುಕೊಂಡು, “ ಮರಣ ಸಮಯದಲ್ಲಿ ಯಾವನನ್ನು ತಂದೆ ತ್ಯಕ್ತಪುತ್ರನೆಂದು ಹೇಳಿ ಹೋಗಿದ್ದಾನೋ ಅವನ ವಿಷಯ ಕೇಳಬೇಡಿರಿ. ನಮಗೆ ಅವನ ಸಂಬಂಧವೇನೂ ಇಲ್ಲ. ನಮ್ಮ ತಮ್ಮ ಸತ್ತುಹೋದ! ” ಎಂದು ಹೇಳುತ್ತಿದ್ದ.

ಅವನ ಮಾತು ಕೇಳಿ ಯಾರು ಹತ್ತಿರಿದ್ದವರ ಕಡೆ ಕಣ್ಣು ಬಡಿ ದರು, ಯಾರು ಅಲಕ್ಷ್ಯದಿಂದ ಗೋಣು ಹಾಕಿ ತಮ್ಮ ಭಾವವ್ಯಕ್ತಗೊಳಿಸಿ ದರು. ವಿನೋದ ಇನ್ನು ದಿಕ್ಕೇಡಿಯಾದ, ಗೋಕುಲ ಯಾವ ಚಾತು ರ್ಯದಿಂದಲೋ ಹದಿನಾರಾಣೆಯನ್ನೂ ಗಿಳಂಕೃತ ಮಾಡಿದ ಎಂದು

ಎಲ್ಲರೂ ಸಹಜವಾಗಿಯೇ ಅರಿತರು. ಬಹುಜನರು ವಿನೋದನ ಬಗ್ಗೆ ಹಿಂದೆ ಸಹಾನುಭೂತಿ ತೋರಿಸತೊಡಗಿದರು. ಕೆಲಕೆಲವರ ಮಾತಿನಲ್ಲಂತೂ ಅವನು ತಿರುಗಿ ಬಂದು ವ್ಯಾಜ್ಯ ಹೂಡಿದರೆ ಅವರ ಸಹಾಯ ಸಿಕ್ಕಬಹುದೆಂಬುದು ಧ್ವನಿತವಾಗುತ್ತಿತ್ತು. ಸುವಿಜ್ಞ ಜಯಲಾಲ ಬನರ್ಜಿಗಳು ಸ್ಪಷ್ಟವಾಗಿಯೇ ಮಾತನಾಡತೊಡಗಿದರು: 'ಮನುಷ್ಯನನ್ನು ಅರಿತುಕೊಳ್ಳುವುದು ಅಸಾಧ್ಯ ಎನ್ನುವರಲ್ಲ, ಅದಕ್ಕೆ ಜೀವಂತ ಪ್ರಮಾಣ ಈ ಗೋಕುಲ ಮಜುಮದಾರ. ನನ್ನ ಕಣ್ಣಲ್ಲಿ ಮಾತ್ರವೇ ಅವನಿಗೆ ಮಣ್ಣೆರಚುವುದಾಗಲಿಲ್ಲ. ಹುಡುಗರಿಂದ ಮುದುಕರ ತನಕ ಗಂಡುಸರು ಹೆಂಗುಸರೆಲ್ಲರೂ ಗೋಕುಲನನ್ನು ಸತ್ಯನಿಷ್ಠನೆಂದು, ಭ್ರಾತೃವತ್ಸಲನೆಂದು, ಧರ್ಮರಾಯನೆಂದು ಮುಗಿಲು ಹರಿಯುವಂತೆ ಕೊಂಡಾಡುತ್ತಿದ್ದರು; ನಾನೊಬ್ಬ ಮಾತ್ರ ಮೌನವಾಗಿ ನಸುನಕ್ಕು 'ಎಲಾ ತಬ್ಬಲಿ ಮಲತಾಯಿ ಮಗನ ಮೇಲೆ ಇಷ್ಟು ಪ್ರೇಮವೇ!' ಎಂದುಕೊಂಡಿದ್ದೆ. ವೇದ ಪುರಾಣಗಳಲ್ಲಿ ಯಾವ ಕಾಲದಲ್ಲಿಯೂ ಆಗದಿದ್ದುದು, ಈ ಘೋರ ಕಲಿಕಾಲದಲ್ಲಿ ಆಗುವುದು! ನಾನಿಷ್ಟು ದಿನ ಬಾಯಿ ಮುಚ್ಚಿಕೊಂಡು ಕೌತುಕ ನೋಡುತ್ತಿದ್ದೆ. ಯಾರ ಮುಂದೇನೂ ಆಡಲಿಲ್ಲ. ಏನಗತ್ಯ! ನನಗೆ ಗೊತ್ತಿತ್ತು. ಒಂದಿನ ಎಲ್ಲವೂ ಹೊರಬೀಳುವುದೆಂದು. ಈಗ ನೀವೇ ನೋಡಿರಿ–ಗೋಕುಲನ ಬಗ್ಗೆ ನಾ ಕಾಯಾಸ ಕಟ್ಟಿದಂತೆಯೇ ಆಯಿತಿಲ್ಲವೋ!" ಅವರ ಕಾಯಾಸ ಯಾರಿಗೂ ಗೊತ್ತಿದ್ದಿಲ್ಲವೆಂದ ಮೇಲೆ ಅವರ ಕಾಲಜ್ಞಾನವನ್ನು ಎಲ್ಲರೂ ಕುಂಯೆನ್ನದೆ ಒಪ್ಪಬೇಕಾಯಿತು.

ನೋಡು ನೋಡುವಷ್ಟರಲ್ಲಿ ಮುಖಾಮುಖಿಯಾಗಿ ಸುದ್ದಿ ಊರೆಲ್ಲ ಹಬ್ಬಿತು. ಹೊರಹೊರಗೆ ತನ್ನ ವಿರುದ್ಧ ಆಂದೋಲನ ಇಷ್ಟು ತೀವ್ರವಾಗಿ ಇಷ್ಟು ಪ್ರಚಂಡವಾಗಿದೆ ಎಂಬುದು ಗೋಕುಲನಿಗೆ ಗೊತ್ತಾಗಲಿಲ್ಲ.

ಭವಾನಿ ಯಾವಾಗಲೂ ಅಲ್ಪಭಾಷಿಣಿ. ನಿನ್ನೆ ರಾತ್ರಿಯಿಂದಂತೂ ವ್ಯಥೆಯ ಭಾರದಿಂದ ಅವಳ ಹೃದಯ ಸ್ತಬ್ಧವಾಗಿಬಿಟ್ಟಿದೆ. ಮನೋರಮೆ

ಹೊತ್ತು ನೋಡಿ ಗಂಡನನ್ನು ಏಕಾಂತದಲ್ಲಿ ಕರೆದು, "ಅವ್ವನ ಪ್ರಕೃತಿ ನೋಡಿದಿರಾ ?" ಎಂದಳು.

ಗೋಕುಲ ಉದ್ವಿಗ್ನನಾಗಿ "ಇಲ್ಲ ಏನಾಗಿದೆ ?" ಎಂದ.

ಮನೋರಮೆ ರಾಗವೆಳೆದಳು: "ಆಗುವುದು ಮತ್ತೇನು ! ನಿನ್ನೆ ಎಂದೆನಲ್ಲ, ಮೈದುನರ ದುಡ್ಡು ಹಾಳು ಮಾಡುವ ವಿಷಯ. ಅದಕ್ಕೆ ನನ್ನ ಸಂಗಡ ಮಾತು ಬಿಟ್ಟಿದ್ದಾರೆ. ನಿಮ್ಮೊಡನೆ ಮಾತಾಡುತ್ತಾರಷ್ಟೆ? "

"ಇಲ್ಲ, ನನ್ನ ಕೂಡೂ ಇಲ್ಲ."

ಮನೋರಮೆ ಗೋಣು ಹಾಕಿ ದನಿ ಇನ್ನಷ್ಟು ತಗ್ಗಿಸಿ ನುಡಿದಳು: "ನೋಡಿರಿ ಮಜ. ಮೈದುನ ಎರಡೂ ಕೈಲಿ ಹಾರಿಸಿಬಿಟ್ಟ ಹಣ ಇದ್ದಿದ್ದರೆ ನಮಗೇ ಇರುತ್ತಿತ್ತು. ಮಾವ ನಮಗೇ ಎಲ್ಲ ಬರೆದು ಕೊಟ್ಟಿದ್ದಾರೆ. ಇವರು ನಮ್ಮ ಸರ್ವನಾಶ ಮಾಡುತ್ತಾರೆ. ಅದನ್ನು ಸ್ವಲ್ಪ ಆಡಿದ್ದಕ್ಕೆ ಮಾತು ಬಿಡುವುದೆ ? ಇದೇನು ರೀತಿ ? ನೀವೋ ಅವ್ವ ಅವ್ವ ಎಂದು ಬಡಕೊಂಡು ಸಾಯುವಿರಿ ! ನೀವೇ ಹೇಳಿರಲ್ಲ, ನಿಜವೋ ಸುಳ್ಳೊ ?"

ಗೋಕುಲನ ಮುಖ ಒಮ್ಮೆಲೆ ಕಪ್ಪಿಟ್ಟಿತು. ಅವನಿಗೆ ಉತ್ತರ ತೋಚಲಿಲ್ಲ. ಮನೋರಮೆ ಬಹುಶಃ ಅದನ್ನರಿತೇ ಎಂದಳು: "ಮೈದುನ ಹೇಗೇ ಇರಲಿ, ಏನೇ ಮಾಡಲಿ, ಅವರಾದರು ಹೊಟ್ಟೆಯ ಮಕ್ಕಳು. ನೀವು ಮಲಮಕ್ಕಳು. ಆಸ್ತಿಯೆಲ್ಲ ನಿಮಗಾಯಿತು. ಇದು ಯಾವ ಹೆಂಗುಸಿಗೆ ಸಹಿಸೀತು ? ಇಲ್ಲ ಇಲ್ಲ, ನೀವು ನನ್ನ ಮಾತನ್ನು ಇನ್ನು ಹೀಗೆ ಹಾರಿಸಿಬಿಡಲಾಗದು. ಈಗಿನಿಂದಲೇ ಜೋಕೆಯಿಂದಿರಬೇಕು. ಇನ್ನು ಮುಂದೆ ಹೀಗೆ ಅವ್ವ ಅವ್ವ ಎಂದು ಅತ್ತರೆ ಬಾಯಲ್ಲಿ ಮಣ್ಣು ಬೀಳುವುದು, ಹೇಳಿರುತ್ತೇನೆ. ಸೊತ್ತು ಸಂಪತ್ತೆಂದರೆ ಮಹಾ ಭಯಂಕರ ವಸ್ತು."

ಗೋಕುಲನ ಹೃದಯ ಅಭೂತಪೂರ್ವಶಂಕೆಯಿಂದ ಅದುರಿತು. ಅವನು ವಿವರ್ಣ ಮುಖದಿಂದ ಪ್ಯಾಪ್ಯಾ ಮಾಡುತ್ತ ನಿಂತ. ಹೆಂಡತಿ ಮತ್ತೆಂದಳು: "ನಮಗೆ ಹೆಂಗುಸರಿಗೆ ತಿಳಿದಷ್ಟು ಹೆಂಗುಸರ ಮನಸು

ನಿಮಗೆ ಗಂಡುಸರಿಗೆ ತಿಳಿಯುವುದಿಲ್ಲ. ನನ್ನ ಮಾತು ಕೇಳಿರಿ. '' ಎಂದು ಅವಳು ಸ್ವಲ್ಪ ಹೊತ್ತು ಗಂಡನ ಮೋರೆ ನೋಡಿದಳು. ಕೆಲಸ ಎಷ್ಟೊ ಫಲಿಸಿದೆ ಎಂದರಿತು ಪುನಃ ಆರಂಭಿಸಿದಳು: " ಮೈದುನ ಹೀಗೆಯೇ ಪಿರಿಪಿರಿ ತಿರುಗಿದರೆ ನಡೆಯದು. ನೀವು ಅವರನ್ನು ಬೇಕಾದಷ್ಟು ಓದಿಸಿದ್ದೀರಿ. ಇನ್ನವರು ಏನಾದರೊಂದು ಕೆಲಸ ಹಿಡಿದು ತಾಯಿಯನ್ನು ಕರೆದುಕೊಂಡು ಹೋಗಿ ಮನೆ ಮಾಡಬೇಕಾಗುವುದು. ಅವರು ತಮ್ಮ ತಾಯಿಯನ್ನು ಇನ್ನು ಬಹಳ ದಿನ ನಮ್ಮಲ್ಲಿ ಬಿಡಲಾರರು. ಅಲ್ಲದೆ, ಇರುವುದಕ್ಕೆ ಒಂದು ಗುಡಿಸಲನ್ನಾದರೂ ಮಾಡಿಕೊಳ್ಳಬೇಕು. ಅದಕ್ಕೆ ನಾವೂ ಶಕ್ಯವಿದ್ದಷ್ಟು ಸಹಾಯ ಮಾಡಬೇಕು—ಇಂಥ ಒಬ್ಬ ಮಜುಮದಾರರ ಮಗ ತನ್ನ ಮಲತಮ್ಮನನ್ನು ನೋಡಲೇ ಇಲ್ಲ ಎನ್ನುವಂತಾಗಬಾರದು. ಮಲತಮ್ಮನಿಗೆ ನಿಮ್ಮದೇನು ಸಂಬಂಧವೆಂದು ಎನ್ನುವವರೂ ಉಂಟು. ಆದರೆ, ನಾವು ಹಾಗೆನ್ನಲಾಗದು. '' ಎಂದು ಗಂಡನನ್ನು ವಿಚಾರ ಮಾಡಲು ಬಿಟ್ಟು ಹೊರಟುಹೋದಳು.

ಅದ್ಭುತ ಆಶ್ಚರ್ಯಕರ ಸ್ವಪ್ನಗಳನ್ನು ನೋಡುತ್ತಿರುವನೋ ಎಂಬಂತೆ ಗೋಕುಲ ಅಲ್ಲಿಯೇ ಶೂನ್ಯದೃಷ್ಟಿಯಿಂದ ನೋಡುತ್ತ ಕುಳಿತ. ಎಲ್ಲ ಮಾತುಗಳನ್ನು ಕೇಳಗೊತ್ತಿ ' ಸೊತ್ತು ಸಂಪತ್ತೆಂಬುದು ಮಹಾ ಭಯಂಕರ ವಸ್ತು ' ಎಂಬುದೇ ಅವನ ಕಿವಿಯಲ್ಲಿ ಗುಂಯ್ಗುಡತೊಡಗಿತು. ಅದಕ್ಕಾಗಿಯೇ ಬಹುಶಃ ತಾಯಿ ಸಿಟ್ಟಾಗಿ ತನ್ನನ್ನು ಬಿಟ್ಟು ಕಡೆತನಕ ವಿನೋದನ ಹತ್ತಿರ ಹೊರಟು ಹೋಗುವಳೆಂದೆನಿಸಿತು. ತನ್ನ ಹೆಂಡತಿ ಹೇಳಿದುದು ಸುಳ್ಳಲ್ಲ ಎಂದು ಅವನಿಗೆ ತೋರಿತು. ಆವೊತ್ತಿಡೀ ದಿನ ತಾಯಿಯೊಡನೆ ಅವನ ಮಾತಾಗಿರಲಿಲ್ಲ. ಕೆಲಸಕ್ಕಾಗಿ ಅವಳೆದುರಿಗೆ ಅವನು ಎರಡು ಮೂರು ಸಾರಿ ಅಡ್ಡಾಡಿದ್ದ; ಆದರವಳು ಕಣ್ಣೆತ್ತಿ ನೋಡಲಿಲ್ಲಕೂಡ. ಭವಾನಿ ಎಂದೂ ಬಹಳ ಮಾತಿನವಳಲ್ಲವೆಂದು ತಿಳಿದು ಅವನಿಗೆ ಆಗೇನೂ ಎನಿಸಿರಲಿಲ್ಲ. ಈಗ ಅದರ ವಿಷಯವೆಲ್ಲ ನಿಚ್ಚಳವಾಗಿ ಕಂಡಿತು.

ಆದರೂ ಈ ನೀರವ ವಿರುದ್ಧತೆಯೂ ಅವನಿಗೆ ಬಹಳ ಅಸಹ್ಯವಾಯಿತು. ಅವನು ತಕ್ಷಣ ಅಲ್ಲಿಂದೆದ್ದು ಎದುರೆದುರಾಗಿ ತಾಯೊಡನೆ ಜಗಳವಾಡ ಲೆಂದು ಅವಳ ಕೋಣೆಗೆ ಧಾವಿಸಿದ. "ಹೀಗೆ ತಲೆಚಿಟ್ಟು ಹಿಡಿದು ಕೊಂಡು ಕುಳಿತುಬಿಟ್ಟರೆ ಮನೆಯೊಳಗೆ ಹೇಗೆ ಸಾಗಬೇಕಮ್ಮ ?" ಎಂದ.

ಭವಾನಿ ವಿಸ್ಮಯದಿಂದ ತಲೆಯೆತ್ತಿದೊಡನೆ ಗೋಕುಲ ನುಡಿದ: "ವಿನೋದ ರಾಶಿ ರಾಶಿ ಹಣ ವೆಚ್ಚ ಮಾಡುವನೆಂದು ನಿನ್ನ ಸೊಸೆ ಎನ್ನು ವುದೇನು ಸುಳ್ಳಲ್ಲ. ಅಪ್ಪ ತನ್ನ ಸಂಪತ್ತೆಲ್ಲ ನನಗೆ ಕೊಟ್ಟು ಹೋದರೆ ನನ್ನದೇನು ತಪ್ಪು ? ನೀ ಏನೆನ್ನುವುದು ಅಪ್ಪಗೆನ್ನು–ನನ್ನ ಮೇಲೆ ಸಿಟ್ಟು ಮಾಡಿಕೊಳ್ಳಬೇಡ."

ಭವಾನಿಗೆ ಮರ್ಮಕ್ಕೆ ತಾಗಿತು. ಅವಳೆಂದಳು: "ನನಗೆ ಯಾರ ಮೇಲೂ ಸಿಟ್ಟಿಲ್ಲ ಗೋಕುಲ, ಯಾರಿಗೇನೂ ಎನ್ನುವುದಿಲ್ಲ."

"ಹಾಗಿದ್ದರೆ ನೀನೀ ರೀತಿ ಇರಲಾಗದು. ಕೆಲಸಗಿಲಸ ಹಿಡಿ ಯೆಂದು ವಿನೋದನಿಗೆ ಹೇಳು. ಇಲ್ಲಿ ಅವನಿಗೆ ಸ್ಥಳವಿಲ್ಲ."

"ಹಾಗೆಯೇ ಆಗುವುದು. ಹೆಚ್ಚಿಗೆ ಹೇಳುವ ಅಗತ್ಯವೇನಿಲ್ಲ." ಎಂದು ಭವಾನಿ ತಲೆತಗ್ಗಿಸಿದಳು. ಜಗಳಕ್ಕೆ ಆಸ್ಪದ ಸಿಕ್ಕದೆ ನಿರುಪಾಯ ನಾಗಿ ಗೋಕುಲ ವಟಗುಟ್ಟುತ್ತ ಹೊರಟುಹೋದ.

ಹೆಂಡತಿಯನ್ನು ಕರೆದು ಹೇಳಿದ: "ಈವೊತ್ತು ತಾಯಿಗೆ ಸ್ಪಷ್ಟ ಹೇಳಿಬಿಟ್ಟೆ: ವಿನೋದ ನಮ್ಮಲ್ಲಿ ಇರಲಾಗದು, ಏನಾದರೂ ಕೆಲಸ ಹಿಡಿ ಯಲಿ, ಮನಸಿಗೆ ಬಂದಹಾಗೆ ಮಾಡಲಿ, ನನಗೇನು ಗೊತ್ತಿಲ್ಲ ಎಂದು."

ಮನೋರಮೆ ಆನಂದದಿಂದ ಮುಂದಕ್ಕೆ ಬಂದು ಪಿಸುಮಾತಿನಲ್ಲಿ ಕೇಳಿದಳು: "ಅವರೇನೆಂದರು ?"

"ಮತ್ತೇನು ಹೇಳುವಳು ? ಅವಳು ಹೇಳಿದರೆ ನಾ ಕೇಳುವೆನೆ ?"

ಮನೋರಮೆ ಕಣ್ಣು ತಿರುವುತ್ತ, “ ಎಂದುದಾದರೂ ಏನು ? ” ಎಂದಳು.

ಗೋಕುಲನೂ ಅದೇ ರೀತಿ ಉತ್ತರವಿತ್ತ: “ ಎನ್ನುವುದೇನು ! ವಿನೋದ ಇಲ್ಲಿ ಇರುವಂತಿಲ್ಲ ಎಂಬುದನ್ನು ಆಕೆ ಒಪ್ಪಬೇಕಾಯಿತು. ”

ಮನೋರಮೆ ಮತ್ತಷ್ಟು ಮೆಲುದನಿಯಿಂದ ಎಂದಳು: “ ಇದು ಹದಿನಾರಾಣೆ ಸಿಟ್ಟಿನ ಮಾತಲ್ಲದೆ ಮತ್ತೇನು ? ಅವರ ಮನಸು ತಮ್ಮ ಮಗನಕಡೆ ಹರಿದಿದೆ, ನೀವವರ ಕಣ್ಣಿಗೆ ಒತ್ತುತ್ತಿದ್ದೀರಿ ! ”

ಗೋಕುಲ ಗೋಣು ಹಾಕುತ್ತ, “ ನನಗೇನದು ತಿಳಿಯುವುದಿಲ್ಲವೆ ? ಈ ಗತ್ತು ನನ್ನ ಮುಂದೆ ನಡೆಯುವುದೆ ? ” ಎಂದು ಹೊರಹೊರಟ. ಎದುರಿಗೆ ರಸಿಕ ಚಕ್ರವರ್ತಿಯನ್ನು ಕಂಡು “ ಏನು, ಒಂದು ಹೊಸ ಸುದ್ದಿ ಕೇಳಿದ್ದೀಯಾ ಚಕ್ಕೊತ್ತಿ ? ಇಷ್ಟು ದಿನ ಇಷ್ಟು ಮಾಡಿ ಮುಟ್ಟಿದ ನಾನು ಅವ್ವನ ಕಣ್ಣಿಗೆ ವಿಷವಾಗಿದ್ದೇನೆ. ನನ್ನ ಕೂಡ ಮಾತಾಡುವುದಿಲ್ಲ, ಇದಿರಿಗೆ ಹಾದರೆ ಮುಖ ತಿರುವುತ್ತಾಳೆ. ”

ರಸಿಕ ಅಕೃತ್ರಿಮ ಆಶ್ಚರ್ಯದಿಂದ, “ ಛೆ ಛೆ, ಇದೇನೆನ್ನುವಿರಿ ದೊಡ್ಡಬಾಬೂ ? ” ಎಂದ.

“ ಏನೆ ?—ಏ ಹಾವುನ ತಾಯಿ ಬಾ ಇಲ್ಲಿ. ”

ಮನೆಯ ಮುದುಕ ದಾಸಿ ಏನೋ ಕೆಲಸಕ್ಕೆ ಹೋಗುತ್ತಿದ್ದಳು. ಒಡೆಯನ ಕರೆ ಕೇಳಿ ಬಂದಳು. ಗೋಕುಲ ರಸಿಕನ ಕಡೆ ನೋಡಿ, “ ಹಾ, ಕೇಳಿಕೋ. ಹೇಳು ಹಾವುನ ತಾಯಿ, ಅವ್ವ ನನ್ನ ಸಂಗಡ ಮಾತಾಡಿದ್ದು ನೋಡಿದ್ದೀಯಾ? ಇದಿರಿಗೆ ಹೋದರೆ ಮೋರೆ ತಿರುಗಿಸುವುದಿಲ್ಲವೆ?” ಎಂದ.

ಅವಳಿಗೆ ಯಾವುದೂ ಗೊತ್ತಿರಲಿಲ್ಲ. ಕಕ್ಕಾವಿಕ್ಕಿಯಾಗಿ ಸ್ವಲ್ಪ ಹೊತ್ತು ನೋಡುತ್ತಿದ್ದು, ಕೊನೆಗೆ ಒಡೆಯನ ಮನವರಿಯುದಂತೆ ಗೋಣು ಹಾಕಿ ಹೋರಟುಹೋದಳು.

ಆವೊತ್ತೆಲ್ಲಾ ಬಂದವರ ಹೋದವರ ಇದಿರಿಗೆ ಅವನು ಅವ್ವನನ್ನು ಚೂರಿಕೊಳ್ಳುತ್ತಲಿದ್ದ. " ನಾ ಮಲಮಗ ಅಲ್ಲವೆ ? ಅಂತೆಯೇ ತಂದೆ ಸಾಯುಸಾಯುವುದರೊಳಗೇ ಅವಳ ಕಣ್ಣಿಗೆ ವಿಷವಾಗಿಬಿಟ್ಟೆ " ಎಂದು ಪುನಃ ಪುನಃ ಹೇಳುತ್ತಲಿದ್ದ.

ಸಂಜೆಗೆ ಮನೆಗೆ ಬಂದೊಡನೆ ಗೋಕುಲ ಭವಾನಿಗೆ ತಿಳಿಸಿದ: " ಮನಷ್ಯರನ್ನು ಕಳಿಸಿ ಬರದವಾನದಿಂದ ಚಿಕ್ಕತ್ತೆ ಮೊದಲಾದವರನ್ನು ಕರೆಸಿಕೊಳ್ಳುವಂಥದೇನು ಜಗತ್ಯವಿಲ್ಲ. ಬರುವವರು ಬೇಕಾದರೆ ತಾವೇ ಬರಲಿ. "

ಭವಾನಿ ಮೃದುಸ್ವರದಿಂದ ನುಡಿದಳು: " ಆದರಿದು ಉಚಿತವೇ ಗೋಕುಲ ? "

ಗೋಕುಲ ಒರಟು ಉತ್ತರ ಕೊಟ್ಟ: " ಉಚಿತವೋ ಅನುಚಿತವೋ ನನಗೇನು ಗೊತ್ತು ? ಎರಡೂ ಕೈಲಿ ಸೂರೆ ಮಾಡಲಿಕ್ಕೆ ನನ್ನ ಹತ್ತಿರವೇನು ಅಷ್ಟು ಹಣವಿಲ್ಲ. ಈ ವಿಷಯದಲ್ಲಿ ನೀ ಹಟ ಹಿಡಿಯಬೇಡ "

ಚಿಕ್ಕತ್ತೆ ಮೊದಲಾದವರನ್ನು ಕರೆಸಲು ನಿನ್ನೆ ಅವಳೇ ಹೇಳಿದ್ದಳು. ಆದರೀಗ ಏನೂ ಮಾತನಾಡದೆ ತನ್ನ ಕೆಲಸದಲ್ಲಿ ತೊಡಗಿದಳು. ಆದರೂ ಗೋಕುಲ ಅಲ್ಲಿಯೇ ಎಡೆಯಾಡುತ್ತ, " ಕರೆಸೆಂದರೂ ನಾ ಕರೆಸುವ ಹಾಗಿಲ್ಲ. ಸಾಲ ಮಾಡಿ ನನಗೆ ನಾನೇ ಉರುಲು ಹಾಕಿಕೊಳ್ಳಬಯಸುವುದಿಲ್ಲ. " ಎಂದ.

" ಒಳ್ಳೆಯದು ಗೋಕುಲ, ಅದು ನಿನಗೆ ಉಚಿತವೆನಿಸಿದರೆ ಕರೆಸಬೇಡ. "

" ಹೌದು, ಈವೊತ್ತಿನಿಂದ ಉಚಿತ ಅನುಚಿತ ನಾನೇ ವಿಚಾರ ಮಾಡಿಕೊಳ್ಳಬೇಕು. ನನಗೇನು ನನ್ನ ತಾಯಿ ಇದ್ದಾಳೆಯೋ ? ನಾ ಸತ್ತರೂ ಯಾರಿಗೇನಾಗಬೇಕಾಗಿದೆ ! ನನಗೆ ಇನ್ನಾರಿದ್ದಾರೆ ? ನನ್ನನ್ನು

ನಾನೇ ಸಂಬಾಳಿಸಿಕೊಳ್ಳಬೇಕು. ದುಡ್ಡು ದುಗ್ಗಾಣಿ ನೋಡಿ ವೆಚ್ಚಮಾಡ ಬೇಕು. ನನಗೆ ತಾಯಿಯಿಲ್ಲ!—" ಎನ್ನುತ್ತೆನುತ್ತ ಗೋಕುಲ ಹೊರಟು ಹೋದ.

ಅಕಸ್ಮಾತ್ ಧನಕನಕಗಳಲ್ಲಿ ಅವನ ಈ ಆಸಕ್ತಿಯನ್ನು ಕಂಡು ಭವಾನಿ ಉಸಿರ್ಗರೆದಳು. ಗೋಕುಲ ತತ್‌ಕ್ಷಣದಲ್ಲಿಯೇ ತಿರುಗಿ ಬಂದು, " ನನಗೇನು ತಿಳಿಯುವುದಿಲ್ಲವೆ? ಇದು ನಿನ್ನ ಸಿಟ್ಟಿನ ಮಾತಲ್ಲವೆ? ನಿನ್ನೆ ನೀನೇ ಹೇಳಿದ್ದೆ, ಕರೆಸು ಎಂತ; ಈವೊತ್ತು ಎನ್ನುತ್ತೀ ಮನಸಿಗೆ ಬಂದ ಹಾಗೆ ಮಾಡು ಎಂತ. ನನಗೆ ತಂದೆಯಿಲ್ಲ, ಅಣ್ಣತಮ್ಮಂದಿರಿಲ್ಲ ಎಂದು ಇಷ್ಟು ಹಿಂಸಿಸುವೆಯಲ್ಲವೆ? ಮುಂದಿ ಎನ್ನಬೇಕು— ಗೋಕುಲ ನಿಜವಾ ಗಿಯೂ ತಾಯಿಯ ಮಾತು ನಡೆಸುವುದಿಲ್ಲವೆಂದು!"

ಅವನ ಅತ್ಯಂತ ಅಕಲ್ಪಿತ ಆರೋಪವನ್ನು ಕೇಳಿ ಭವಾನಿ ವಿಮೂಢ ಳಂತೆ ಅವನ ಕಡೆ ಕ್ಷಣ ನೋಡುತ್ತಿದ್ದು, ' ಗೋಕುಲ, ನಾನು ನಿಮ್ಮದೇ ತಪೊಳಗೂ ಇಲ್ಲ— ನಾನು ಯಾವ ಮಾತೂ ಆಡಿಲ್ಲ ತಮ್ಮಾ." ಎಂದಳು.

ಗೋಕುಲನ ಕಣ್ಣೆರಡೂ ನೀರುದುಂಬಿದವು. " ಹೀಗೆನ್ನಲಿಕ್ಕೆ, ಅವ್ವಾ, ನಿನ್ನ ಯಾವ ಮಾತು ನಾ ನಡೆಸಿಲ್ಲ? ಆದರಿದರಿಂದ ಒಳ್ಳೆಯದಾಗ ಲಿಕ್ಕಿಲ್ಲ. ವಿನೋದ ಲಜ್ಜೆ ತಿರಸ್ಕಾರಗಳಿಂದ ಮನೆಬಿಟ್ಟು ಹೊರಟು ಹೋದ, ನಾನೂ ಕಣ್ತೊಯ್ದತ್ತ ಹೋಗಿ ಬಿಡುವೆ. ನೀ ನನ್ನ ದುಡ್ಡು ದೌಲತ್ತು ತೆಗೆದುಕೊಂಡು ಇರು" ಎಂದು ಕಣ್ಣೊರಸಿಕೊಳ್ಳುತ್ತ ತ್ವರಿತ ಗತಿಯಿಂದ ಹೋಗಿಬಿಟ್ಟ.

## ೭

ಗೋಕುಲನ ಹಿರಿಮಗಳು ಹೇಮಾಂಗಿನಿ ಭವಾನಿಯ ಹತ್ತಿರ ಮಲ ಗುತ್ತಿದ್ದಳು. ಬೆಳಗು ಆಗುತ್ತಿರುವಾಗಲೇ ಒದರುತ್ತ ಬಂದಳು: "ಕಕ್ಕ ಬಂದ, ಅವ್ವಾ ಕಕ್ಕ ಬಂದ."

ಗೋಕುಲ ಗಡಬಡಿಸಿ - ಎದ್ದು ಕುಳಿತ. ಹೆಂಡತಿಯ ನಿರಾನಂದ ವಿಸ್ಮಯದ ಪ್ರಶ್ನೆ ಕೇಳಿಸಿತು: "ಯಾವಾಗ ಬಂದರೆ ನಿನ್ನ ಕಕ್ಕ ?"

"ಬಹಳ ರಾತ್ರಿಯಾಗಿತ್ತವ್ವ."

"ಈಗೇನು ಮಾಡುತ್ತಿದ್ದಾರೆ ?"

"ಇನ್ನೂ ಎದ್ದಿಲ್ಲ; ತನ್ನ ಕೋಣೆಯಲ್ಲಿ ಮಲಗಿದ್ದಾನೆ."

ತಾಯಿ ಮತ್ತೆ ಪ್ರಶ್ನಿಸದೆ ಕೆಲಸಕ್ಕೆ ಹೋದಳು. ಗೋಕುಲ ಕೋಣೆಯ ಹೊರಗೆ ಹಣೆಯಿಕ್ಕಿ ಮಗಳನ್ನು ಕೈಮಾಡಿ ಕರೆದು, "ನಿಮ್ಮಜ್ಜಿ ಅವನಿಗೆ ಏನು ಹೇಳಿದಳೇ ಹಿಮೂ ?" ಎಂದು ಕೇಳಿದ.

"ಗೊತ್ತಿಲ್ಲ."

"ಬಹಳ ಕೊಚ್ಚಿಕೊಂಡಿರಬೇಕು ಕಾಣುತ್ತದೆ?"

ಹಿಮು ಅನಿಶ್ಚಿತಭಾವದಿಂದ ಎರಡು ಬಾರಿ ತಲೆ ಅಲ್ಲಾಡಿಸಿ, ಕೊನೆಗೇನೋ ಯೋಚಿಸಿ "ಹೂಂ" ಎಂದಳು. ಗೋಕುಲ ವ್ಯಗ್ರನಾಗಿ ಅವಳ ಕೈಹಿಡಿದು ಕೋಣೆಯೊಳಗೆ ಎಳೆದುಕೊಂಡು ಹೋಗಿ ಮೆಲ್ಲನೆ ಕೇಳಿದ: "ನಿಮ್ಮಜ್ಜಿ ಏನೇನು ಹೇಳಿದಳು, ಎಲ್ಲ ಹೇಳು ಮಗೂ."

ಹಿಮೂಗೆ ತೊಂದರೆಗಿಟ್ಟುಕೊಂಡಿತು. ಕಕ್ಕ ಬಂದಾಗ ಅವಳು ಮಲಗಿದ್ದಳು. ಯಾವುದೂ ಗೊತ್ತಿರಲಿಲ್ಲ. "ನನಗೆ ಗೊತ್ತಿಲ್ಲ ಅಪ್ಪಾ" ಎಂದಳು.

ಗೋಕುಲ ನಂಬಲಿಲ್ಲ. "ಅಲ್ಲಾ, ಇದೇ ಈಗ ಗೊತ್ತಿದೆ ಎಂದೆ. ಅವ್ವ ಹೇಳಬೇಡವೆಂದು ಹೇಳಿದ್ದಾಳೊ ? ನಾ ಯಾರಿಗೂ ಹೇಳುವುದಿಲ್ಲ, ಹೇಳು ಹಿಮೂ." ಎಂದ.

ಈ ಮರು ಸವಾಲಿನಿಂದ, ಪಾಪ, ಹಿಮು ಮಿಕಿ ಮಿಕಿ ನೋಡತೊಡಗಿದಳು. ಗೋಕುಲ ಅವಳ ಬೆನ್ನ ಮೇಲೆ ತಲೆಯ ಮೇಲೆ ಕೈಯಾಡಿಸುತ್ತ ಹುರಿದುಂಬಿಸಲು ಹೇಳಿದ: ' ಹೇಳವ್ಮಾ. ಏನಾಯಿತು? 'ನೀ ಮನೆ ಬಿಟ್ಟು ಹೋಗು' ಎಂದು ಅವ್ವ ಅವನಿಗೆ ಹೇಳಿದಳೇನು?.... ಈ ಎರಡು ರೂಪಾಯಿ ತಕ್ಕೊ, ಗೊಂಬೆ ಕೊಂಡುಕೋ " ಎಂದು ತಲೆದಿಂಬಿನ ಬುಡದಿಂದ ರೂಪಾಯಿ ತೆಗೆದು ಮಗಳ ಕೈಯೊಳಗಿಟ್ಟ.

ಹಿಮು ಶುಷ್ಕವಾಗಿ, " ಹೂಂ " ಎಂದಳು.

" ಆಮೇಲೆ ? "

ಹಿಮು ಹಣ್ಣುಹಣ್ಣಾಗಿ " ಆಮೇಲೆ ನನಗೆ ಗೊತ್ತಿಲ್ಲ " ಎಂದಳು.

ಗೋಕುಲ ಮತ್ತೆ ಪ್ಯೈದಡವುತ್ತ " ಗೊತ್ತಿದೆ. ಹೇಳು; ಅದಕ್ಕೆ ನಿಮ್ಮ ಕಕ್ಕ ಏನೆಂದ ? " ಎಂದು ಕೇಳಿದ.

" ಏನೂ ಎನ್ನಲಿಲ್ಲ. "

ಗೋಕುಲನಿಗೆ ಭರವಸೆಯಾಗಲಿಲ್ಲ. ನಿರಾಶೆಯಿಂದ ಗಡುಸಾಗಿ ಕೇಳಿದ: " ಏನೇನೂ ಎನ್ನಲಿಲ್ಲವೆ? ಅದು ಹೇಗೆ ? "

ತಂದೆಯ ಸಿಟ್ಟನ್ನು ಕಂಡು ಹಿಮು ಅಳುತ್ತಳುತ್ತ ನುಡಿದಳು: " ಅಪ್ಪಾ, ನನಗೆ ಯಾವದೂ ಗೊತ್ತಿಲ್ಲ. "

" ಗೊತ್ತಿಲ್ಲ ? " ಎಂದು ಛಟಾರನೆ ಕೆನ್ನೆಗೊಂದೇಟು ಕೊಟ್ಟು " ನಡೆ ಇಲ್ಲಿಂದ " ಎಂದ ಗೋಕುಲ.

ಹುಡುಗಿ ಅಳುತ್ತಳುತ್ತ ಹೊರಟು ಹೋಯಿತು. ಗೋಕುಲ ಧಡಧಡ ತಾಯಿಯ ಕೋಣೆಗೆ ಹೋಗಿ, " ಚೆಲೋ ನಡೆಸಿದ್ದೀ. ಅವ ಮನೆಗೆ ಬರುವ ಪುರಸತ್ತಿಲ್ಲದೆ ಇಲ್ಲದ್ದೊಂದು ಹೇಳುವುದೆ ? ನನ್ನ ವಿಷಯದಲ್ಲಿ ಅವನ ಮನಸು ಕೆಡಿಸುವುದಕ್ಕಲ್ಲವೆ ? ನಾನೆಲ್ಲಾ ಕೇಳಿದ್ದೇನೆ. ನಿನ್ನ ಮಗನನ್ನು ಮಾತ್ರ ಎಚ್ಚರಿಸು, ಅವನು ನನ್ನ ಕಣ್ಣಿಗೆ ಬೀಳಲಾಗದು. "

ಎಂದು ಹೋಟಬಂತೆಯೇ ಧಡಧಡ ತಿರುಗಿಬಿಟ್ಟ. ಭವಾನಿ ಏನೊಂದೂ ತಿಳಿಯದೆ ಅವಾಕ್ಕಾದಳು.

ಗೋಕುಲ ಹಾವುನ ತಾಯಿಯನ್ನು ಕರೆಸಿ ಕೇಳಿದ: "ತಮ್ಮ ಬಂದಿದ್ದಾನಂತಲ್ಲ ?"

"ಹಾಂ, ಬಾಬೂ, ಮಧ್ಯರಾತ್ರಿಗೆ ಬಂದರು."

"ಅದು ಗೊತ್ತಿದೆ. ಆ ಮೇಲೆ ತಾಯಿ ಮಕ್ಕಳಲ್ಲಿ ಏನೇನು ಮಾತಾಯಿತು ? ನನ್ನ ಹೆಸರಲ್ಲಿ ಅವ್ವ ಬಹಳ ಗೋಳುಹೊಯ್ಕೊಂಡಿರಬಹುದು. ಮನೆಬಿಟ್ಟು ಹೋಗುವ ವಿಷಯ ಏನಾದರೂ—"

ದಾಸಿ ನಡುವೇ ತಡೆದು, "ಇಲ್ಲ ದೊಡ್ಡ ಬಾಬೂ, ಅವ್ವವರು ಏಳಲೇ ಇಲ್ಲ. ಯದು ಅವರ ಬ್ಯಾಗು ತೆಗೆದುಕೊಂಡು ಬಂದ, ನಾ ಅವರ ಕೋಣೆ ತೆರೆದು ದೀಪ ಹಚ್ಚಿದೆ. ಅವರು ಆಗ ಒಳಗೆ ಹೋದವರು ಹೊರಗೆ ಬಂದೇ ಇಲ್ಲ," ಎಂದಳು.

"ಏಕೆ ಮುಚ್ಚಿಡುತ್ತೀ, ನಾ ಎಲ್ಲ ಕೇಳಿದ್ದೇನೆ."

ಹಾವುನ ಆಣೆಯಾಗಿ ದಾಸಿ ಹೇಳಿದಳು: "ಇಂಥ ಮಾತು ಆಡಬೇಡಿರಿ ಬಾಬೂ, ನಾನೇ ನಿಂತು ಚಿಕ್ಕಬಾಬುಗಳಿಗೆ ಎಲ್ಲ ಅಣಿಮಾಡಿಕೊಟ್ಟೆ. ಅವ್ವವರನ್ನು ಕರೆಯಲೇ ಎಂದುದಕ್ಕೆ, 'ಅದೇನಗತ್ಯವಿಲ್ಲ. ನೀನೇ ದೀಪವೊಂದು ಹಚ್ಚಿಕೊಟ್ಟು ಮಲಗಿಕೊ ಹೋಗು' ಎಂದರು. ಅಯ್ಯೋ, ಅವರ ಕಣ್ಣು ಒಳನಟ್ಟಿವೆ, ಮೋರೆ ಬಣ್ಣಗೆಟ್ಟಿದೆ."

ಗೋಕುಲನ ಕಣ್ಣೆರಡೂ ನೀರುದುಂಬಿದವು. ಅವನೆಂದ: "ಆಗದೇನು, ನೀನೇ ಹೇಳು. ಅಪ್ಪ ಸತ್ತುಹೋದ. ಅವನ ಕೊನೆಯ ದರ್ಶನವೂ ಆಗಲಿಲ್ಲ. ಹಣ ಕಾಸೂ ಸಿಕ್ಕಲಿಲ್ಲ; ಅವನ ಮನಸಿಗೆ ಏನೇನಾಗಿದೆಯೋ ಅವನೇ ಬಲ್ಲ. ತಂದೆಯ ಮೇಲೆ ಅವನಿಗೆಷ್ಟು ಪ್ರೀತಿ ಎಂಬುದನ್ನು ನೀವೆಲ್ಲರೂ ಬಲ್ಲಿರಿ. ಹೌದಲ್ಲವೊ ?"

ಅವನ ಕಣ್ಣಿಂದ ಕಂಬನಿ ಉದುರಿದವು.- ಹಾವುನತಾಯಿ ಬಹಳ ಹಿಂದಿನ ದಾಸಿ—ಅದನ್ನು ಕಂಡು ಅವಳ ಕಣ್ಣೊಳಗೂ ನೀರು ಬಂತು. ಭಾರವಾದ ದನಿಯಿಂದ ಅವಳೆಂದಳು: “ ಹೌದು ದೊಡ್ಡಬಾಬೂ, ಅವರು ತಂದೆಯೆಂದರೆ ಜೀವ ಕಳಕೊಳ್ಳುತ್ತಿದ್ದರು. ಆದರೇನು, ಓದೀ ಓದೀ ಅವರ ತಲೆ ಕಾಯ್ದು ಹೋಗಿದೆ. ಅದಕ್ಕೇ—”

“ ಹಾಂ, ಅದೇ ಎನ್ನುತ್ತೇನೆ. ತಲೆ ಕಾಯದೆ ಏನು ? ಅವನು ಕಲಿತದ್ದೇನು ಕಡಿಮೆಯೆ ? ಆನರ್ ಗ್ರ್ಯಾಜುಯೇಟ್ ! ಈ ಹುಗಲಿ, ಚುಂಚಡಾ, ಬಾಬುಗಂಜಗಳಲ್ಲಿ ಯಾರು ನಮ್ಮ ತಮ್ಮನಷ್ಟು ಕಲಿತಿದ್ದಾರೆ? 'ಸಾಹೇಬರು' ಅವನನ್ನು ಕೈಹಿಡಿದು ಕುಳ್ಳಿರಿಸಿಕೊಳ್ಳುವರು—ಅವನೇನು ಅಂಥಿಂಥ ಮನುಷ್ಯನೇ ? ನೀ ಒಂದು ವೇಳೆ ಕಲಕತ್ತೆಗೆ ಹೋದರೆ, ವಿನೋದ ಬಾಬುಗಳ ಮನೆಯ ದಾಸಿಯೆಂದು ಅಲ್ಲಿಯ ಯಾವ ಸದ್ಗೃಹಸ್ಥರಿಗೆ ತಿಳಿದರೂ, ನಿನ್ನನ್ನು ಕರೆದುಕೊಂಡು ಹೋಗಿ ಕೂಡ್ರಿಸಿಕೊಂಡು ಸಾವಿರ ಸಮಾಚಾರ ವಿಚಾರಿಸುವರು, ಬಲ್ಲಿಯಾ ? ಆದರೇನೋ ಎನ್ನುತ್ತಾರಲ್ಲ, ಊರ ಯೋಗಿಗೆ ತಿರುಪೆ ಹುಟ್ಟದಂತೆ ! ಇಲ್ಲಿ ಯಾವ ಮಗ ಅವನನ್ನು ಕೇಳುತ್ತಾನೆ ? ಮೋರೆ ಬಹಳ ಒಣಗಿ ಸಂಡಿಗೆಯಾಗಿದೆಯೋ ? ”

“ ಮೋರೆ ನೋಡಿದರೆ ಕಣ್ಣೀರು ಉಕ್ಕಿಬರುತ್ತದೆ, ದೊಡ್ಡಬಾಬೂ ! ”

ಗೋಕುಲನಿಗೆ ಕಣ್ಣೀರು ಧಾರೆಗಟ್ಟಿತು. ಉತ್ತರೀಯದಿಂದ ಒರಸಿಕೊಂಡು ನುಡಿದ: “ ನೀನೇ ಅವನನ್ನು ದೊಡ್ಡವನನ್ನಾಗಿ ಮಾಡಿದವಳು ಹಾವುನ ತಾಯಿ, ನೀ ಮಾತ್ರ ಅವನನ್ನು ಗುರುತಿಸುವೆ. ಇಷ್ಟು ದಿನವೂ ನಗುತ್ತ ಕೆಲೆಯುತ್ತ ಆಡುತ್ತಪಾಡುತ್ತ ಕಲಿಯುವುದರಲ್ಲಿ ಕಳೆದಿದ್ದಾನೆ. ಈತೆರದ ತೊಡಕು ತೊಂದರೆ ಅವನೆಂದು ನೋಡಿದ್ದಾನೆ ? ಉಯಿಲಿನಲ್ಲಿ ಪಾಲು ಕೊಡಬಾರದೆಂದು ಬರೆದುದಕ್ಕೆ ಕೊಡಬಾರದಷ್ಟೆ !

ಅವನ ತಂದೆಯ ಆಸ್ತಿಯಲ್ಲವೆ ? ಅದಕ್ಕೆ ಯಾರು ಅಡ್ಡ ಬರಬಲ್ಲರು ? ಅವನು ಅಂತಹದೇನು ಮಾಡಿದ್ದು ? ಕಳವೇ, ಕೊಲೆಯೆ ? ಏಕೆ ಆಸ್ತಿ ಸಿಗಬಾರದವನಿಗೆ ? ಕೋರ್ಟು ಕಚೇರಿ ಇಲ್ಲವೆ ? ವಿನೋದ ನ್ಯಾಯ ಹೂಡಿದರೆ ಪೈಗೆ ಪೈ ಲೆಕ್ಕ ಮಾಡಿ ಅರ್ಧಪಾಲು ಕೊಡಬೇಕಾಗುವುದು !''

''ಕೊಡದಿದ್ದರೆ ಹೇಗೆ ದೊಡ್ಡಬಾಬೂ ?''

ಗೋಕುಲ ಉತ್ಸಾಹಿತನಾದ. "ಹೀಗೆನ್ನು. ಮತ್ತೀಕೆ ತಾಯಿ ! ಅಲ್ಲ, ತಾ ನೋಡಿದರೆ ಹೆಂಗುಸು, ಹೆಂಗುಸರ ಹಾಗೆ ಏಕೆ ಇರಬಾರದು ? ತಾ ಏಕೆ ಉಯಿಲು ಮಾಡಲು ಹೇಳಲಿಕ್ಕೆ ಹೋದಳು ? ಅವಳು ಮಾಡಿದ್ದೇನು ತಾಯಿ ಮಾಡುವ ಕೆಲಸವೆ ? ಧರ್ಮ ಇಲ್ಲವೆ ? ದೇವರು ನೋಡುವುದಿಲ್ಲವೆ ? ನಿರ್ದೋಷಿಯನ್ನು ಪೀಡಿಸಿದ್ದಕ್ಕೆ ದೇವರೆದುರು ಅವಳು ಉತ್ತರ ಕೊಡಬೇಕಾಗುವುದಿಲ್ಲವೆ ? ಆಸ್ತಿ! ಬಲುದೊಡ್ಡ ಆಸ್ತಿ ! ಇಂದಿಲ್ಲ ನಾಳೆ ಅವನು ಹೈಕೋರ್ಟ ಜಜ್ಜನಾದರೆ—ಅದನ್ನೇನು ಯಾರೂ ತಡೆಯಲಾರರು—ಆಗ ಹೇಗೆ ಉಳಿಯುವುದು ಆಸ್ತಿ ? ಇದನ್ನೆಲ್ಲ ಯೋಚಿಸಿ ಕೆಲಸ ಮಾಡಬಾರದಿತ್ತೆ ! ಈಗ ಮರ್ಯಾದೆಯಿಂದ ಕೊಡದಿದ್ದರೆ ಆಗ ಮಾನಗೆಟ್ಟು ಕೊಡಬೇಕಾಗುವುದು ! '' ಎಂದ.

ಹಾವುನ ತಾಯಿಗೆ ಹರ್ಷವಾಯಿತು. ಈ ಉಯಿಲುಗಿಯಿಲು ಅವಳ ಮನಸಿಗೆ ಬಂದಿರಲಿಲ್ಲ. " ಒಳ್ಳೆಯದು ದೊಡ್ಡ ಬಾಬೂ, ನೀವೇಕೆ ಚಿಕ್ಕಬಾಬುಗಳನ್ನು ಕರೆದು, ತಮ್ಮಾ ನಿನ್ನ ಪಾಲು ನೀ ತಕ್ಕೋ ಎಂದು ಹೇಳಬಾರದು ? ನೀವು ಕೊಟ್ಟರೆ ಯಾರಿಂಗೂ ಅಲ್ಲ ಎನ್ನಲು ಆಗುವುದಿಲ್ಲ. '' ಎಂದಳು.

ಮುಖ್ಯ ಹೋರಾಟ ಇದ್ದುದು ಇಲ್ಲಿಯೇ. ಅವನು ಕೊಂಚ ಸಮಯ ಮೌನವಾಗಿದ್ದು ಹೇಳಿದ: " ಆದರೆ ನನಗೆ ಕೊಡುವ ಅಧಿಕಾರ ಇಲ್ಲ ಎನ್ನುತ್ತಾರೆ ಎಲ್ಲರೂ. ತಂದೆಯ ಉಯಿಲು ರದ್ದುಗೊಳಿಸಲು ಬರು

ವುದಿಲ್ಲ. ' ಈಕೆ ' ಯ ಸೋದರ ಮಾವ ದೊಡ್ಡ ಮೊಕ್ತಾರ; ಅವನು ಈಕೆಗೆ ಪತ್ರ ಬರೆದಿದ್ದಾನೆ: ಹಾಗೆ ಮಾಡಿದರೆ ನನಗೆ ಜೇಲಾಗುವುದಂತೆ; ತಾಯಿ ಒಪ್ಪಿದರೆ, ಈಕೆ ಒಪ್ಪಿದರೆ ಬರಬಹುದಂತೆ. "

ಇದಕ್ಕೆ ತಕ್ಕ ಉತ್ತರ ಅರಿಯದೆ ದಾಸಿ ತನ್ನ ಕೆಲಸಕ್ಕೆ ಹೊರಟು ಹೋದಳು. ಗೋಕುಲ ತಿರುಗಿ ನೋಡಿದ. ಹಿಮೂ ಆಟಕ್ಕೆ ಹೊರಟಿದ್ದಳು. ಅವಳನ್ನು ಪ್ರೀತಿಯಿಂದ ಹತ್ತಿರ ಕರೆದು ಕೇಳಿದ: " ನಿಮ್ಮ ಕಕ್ಕ ಎದ್ದನೇನ?"

"ಹೂಂ. ಎದ್ದು ತನ್ನ ಕೂಡ್ರುವ ಕೋಣೆಗೆ ಹೋದ. ಯಾರ ಸಂಗಡಲೂ ಮಾತಾಡಲಿಲ್ಲ."

ಬೀದಿಯಂಚಿಗೆ ತಾಗಿದ ಕೋಣೆ ವಿನೋದ ಕೂರುವುದು. ಅದರ ಠೀವಿ ಇಂಗ್ರಾಜಿ ಪದ್ಧತಿಯದು. ಗೋಕುಲ ಕಳ್ಳಹೆಜ್ಜೆಯಿಂದ ಹೋಗಿ ಕಿಡಿಕಿಯೊಳಗೆ ನೋಡಿದ. ವಿನೋದ ಚೌಕಿಯ ಮೇಲೆ ಇರಲಿಲ್ಲ. ನೆಲದ ಮೇಲೆ ಆ ಕಡೆ ಮುಖಮಾಡಿ ಕುಳಿತಿದ್ದ. ಕಂಡು ಗೋಕುಲನ ಕಣ್ಣಲ್ಲಿ ನೀರು ಬಂದಿತು. ಅವನು ತಮ್ಮನ ಮೋರೆ ನೋಡುವ ಆಸೆಯಿಂದ ಒಂದೈದು ನಿಮಿಷ ನೀರವವಾಗಿ ನಿಂತಿದ್ದು, ಕೊನೆಗೆ ಕಣ್ಣೊರಸಿಕೊಂಡು ಹೊರಟು ಬಂದ.

ಚಕ್ರವರ್ತಿ ಕೇಳಿದ: "ಬ್ರಾಹ್ಮಣರ ದಾನಧರ್ಮದ ಪಟ್ಟಿ—"

ಗೋಕುಲನಿಗೆ ಒಮ್ಮೆಲೆ ಕತ್ತಲೊಳಗೆ ಬೆಳಕಿನ ರೇಖೆ ಕಾಣಿಸಿತೆನೋ. ತಟ್ಟನೆ ಹೇಳಿದ: " ಇದಕ್ಕೆಲ್ಲ ಇನ್ನು ನನ್ನನ್ನೇಕೆ ಕಾಡುತ್ತಿ ? ಸಾಕ್ಷಾತ್ ಸರಸ್ವತಿಯೇ ಬಂದು ಬಿಟ್ಟಿದ್ದಾಳೆ. ಯಾರೆಷ್ಟು ಪಂಡಿತರು, ಯಾರ ಮಾನ ಮರ್ಯಾದೆಯೆಷ್ಟು ಎಂಬುದು ವಿನೋದ ಅರಿಯದ್ದಲ್ಲ. ಅವನನ್ನು ಕೇಳಿ ಏಕೆ ನಿರ್ಧರಿಸಿಕೊಳ್ಳಬಾರದು ? ನಾ ಇದರೊಳಗಿನ್ನು ಕೈ ಹಾಕುವುದಿಲ್ಲ ಚಕ್ರೋತ್ತಿ."

"ಆದರಿನ್ನೂ ಚಿಕ್ಕಬಾಬು ಎದ್ದಿಲ್ಲ."

ಮ್ಲಾನಭಾವದಿಂದ ನಕ್ಕು ಗೋಕುಲ ನುಡಿದ: "ಎದ್ದಿಲ್ಲ? ಅವನಿಗೂ ಊಟ ನಿದ್ದೆ ಉಂಟೆ? ಹಾವುನ ತಾಯಿಯನ್ನು ಕೇಳು, ಅವಳು ಕಣ್ಣಾರೆ ನೋಡಿದ್ದಾಳೆ. 'ದೊಡ್ಡ ಬಾಬೂ, ಚಿಕ್ಕಬಾಬುಗಳ ಮುಖ ನೋಡಿದರೆ ಅಳು ನಿಲ್ಲುವುದಿಲ್ಲ' ಎಂದು ಅವಳು ಹೇಳಿದಳು. ಹಾಗಾಗಿದೆ ಅವನ ಮೋರೆ. ವಿಚಾರಮಾಡಿ ಮಾಡಿ ಬಂಗಾರದಂಥ ಬಣ್ಣ ಕಬ್ಬಿಣದಂತಾಗಿದೆ" ಅವನ ಕೋಣೆಯ ಕಡೆ ಬೆರಳು ಮಾಡಿ, "ಹೋಗಿ ನೋಡು ಚಕ್ರೊತ್ತಿ, ತಂಪುನೆಲದ ಮೇಲೆ ಒಬ್ಬನೆ ಸುಮ್ಮನೆ ಕುಳಿತಿದ್ದಾನೆ. ಅದನ್ನು ನೋಡಿದರೆ ಯಾರ ಎದೆ ಬಿರಿಯಲಿಕ್ಕಿಲ್ಲ?" ಎಂದ.

ಅಸ್ಪಷ್ಟ ಮಾತಿನಿಂದ ದುಃಖವನ್ನು ಸೂಚಿಸಿ ಚಕ್ರವರ್ತಿ ಪಟ್ಟಿ ತೆಗೆದುಕೊಂಡು ಹೋಗತೊಡಗಿದ. ಗೋಕುಲ ತಿರುಗಿ ಕರೆದು ಹೇಳಿದ: "ಒಳ್ಳೆಯದು ನೀ ಎಲ್ಲ ಬಲ್ಲವ, ಅದಕ್ಕೇ ನಿನ್ನನ್ನು ಕೇಳುತ್ತೇನೆ— ನಾ ಇರಲಿಕ್ಕೇ ವಿನೋದನಿಗೇಕೆ ಕಷ್ಟ ಕೊಡಬೇಕು? ಉಪವಾಸಗಿಪವಾಸ ಅವನಿಗೆ ತಡೆಯುವುದೆ? ಮತ್ತೆ ಜಡ್ಡುಗಿಡ್ಡು ಬಿದ್ದಾನು. ಅದಕ್ಕೆ ಅವನಿಗೆ ಹೇಗೆ ಅಭ್ಯಾಸವೋ ಹಾಗೆ ಊಟ-ನಿದ್ದೆ ಮಾಡಿಕೊಂಡಿರಲಿ, ಎನ್ನುತ್ತೇನೆ."

ಚಕ್ರವರ್ತಿ ನಿರುತ್ಸಾಹದಿಂದ, "ಅವರಿಂದಾಗದಿದ್ದರೆ--"

ಮಾತು ಮುಗಿಸಗೊಡದೆ ಗೋಕುಲ ಹೇಳಿದ: "ಹೇಗೆ ಆದೀತು ನೀನೇ ಹೇಳು. ನನ್ನದೇನು ದುಡಿಮೆಗಾರರ ದೇಹ, ಎಲ್ಲ ಒಗ್ಗುತ್ತದೆ. ಅವನದು ಹಾಗಲ್ಲ. ಐದಾಗು ಪದವಿ ಪಾಸಾಗಿ ನಾಡಿಗೆ ಶಿರೋಮಣಿ ಆದವ ಅವ. ಅವನ ಶರೀರ ನನ್ನ ಶರೀರ ಸರಿಹಚ್ಚಿ ನೋಡುವೆಯಾ? ಯಾರಿದ್ದಿರೋ ಅಲ್ಲಿ? ಭೂತೋ, ಹೋಗು, ಚಟ್ಟನೆ ನಮ್ಮ ಭಟ್ಟಾಚಾರ್ಯರನ್ನು ಕರೆದುಕೊಂಡು ಬಾ. ಇಲ್ಲದಿದ್ದರೆ ಹತ್ತಿದಷ್ಟು ದುಡ್ಡು ಶ್ರಾದ್ಧ ಕಾಲಕ್ಕೆ ನಗದಾಗಿ ಇಡುವೆ. ಇದಕ್ಕಾಗಿ ನನ್ನ ಒಡಹುಟ್ಟಿದ ತಮ್ಮನನ್ನು

ಸಾಯುಗೊಳ್ಳಲಾರೆ. ಅವನಿಗೆ ಬೆಣತಕ್ಕಿ ಹವಿಸ್ಸು ಉಣಿಸಿ ಸಮಾಪ್ತ ಗೊಳಿಸಲಾರೆ. ಇಷ್ಟರ ಮೇಲೆ ಯಾರು ಬೇಕಾದ್ದು ಎಂದುಕೊಳ್ಳ ಲೊಲ್ಲರೇಕೆ!''

ಚಕ್ರವರ್ತಿ ಅಪ್ರತಿಭನಾಗಿ ಅನುಮೋದಿಸಿದ: " ನೀವೆನ್ನುವುದು ಯೋಗ್ಯವೇ ದೊಡ್ಡ ಬಾಬೂ. ಆದರೆ ಮುಂದಿ—''

''ಎಲಾ, ಮುಂದಿಗಂಜಿ ತಮ್ಮನನ್ನು ಕೊಲ್ಲಲೆ? ನಿಮ್ಮದಿದೆಂಥ ಬುದ್ಧಿ ವಂತಿಕೆ ಚಕ್ರೋತ್ತಿ? ಬೇಡ ಬೇಡ, ಪಟ್ಟಿಗಿಟ್ಟಿ ತೆಗೆದುಕೊಂಡು ಹೋಗಿ ಅವನನ್ನು ಪೀಡಿಸುವ ಅಗತ್ಯವಿಲ್ಲ. ಮೊದಲು ಏನಾದರೂ ತೆಗೆದುಕೊಂಡು ಆರಾಮ ಆಗಲಿ.'' ಎಂದು ಗೋಕುಲ ಅಕಾರಣವಾಗಿಯೇ ಆ ಬಡ ಪ್ರಾಣಿಗೆ ಹರಿದಾಯ್ದ.

## ೮

ಚಾದ ಬಟ್ಟಲನ್ನು ಅಡಿಗೆಯವನ ಕೈಯಿಂದ ತೆಗೆದುಕೊಂಡು ವಿನೋದ ಬಿಸಾಡಿಬಿಟ್ಟ. ಆದರೆ ಆ ವಸ್ತು ಎಷ್ಟು ಗೌಪ್ಯವಾಗಿ ಬಂದಿತ್ತು, ಈಗ ಆ ಬಟ್ಟಲು ಯಾರ ಹೃದಯಕ್ಕೆ ಎಷ್ಟು ಮಟ್ಟಿಗೆ ಆಘಾತಿಸಿತು ಎಂಬು ದನ್ನು ಅಂತರ್ಯಾಮಿಯೇ ಬಲ್ಲ.

ಇಡೀ ದಿನ ವಿನೋದ ಎಷ್ಟೋ ಜನರೊಡನೆ ಮಾತನಾಡಿದ. ಆದರೆ ತನ್ನ ಅಣ್ಣನ ನೆಳಲು ಕಾಣುತ್ತಲೆ ಸರಿದುಹೋಗುತ್ತಿದ್ದ. ಆದರೂ ಆ ನೆಳಲು ಅವನಿಗೆ ಒಂದು ಗಳಿಗೆಯ ಅವಕಾಶವನ್ನೂ ಕೊಡುತ್ತಿರಲಿಲ್ಲ. ವಿನೋದ ಎತ್ತ ಮುಖ ತಿರುವಿಕೊಂಡು ಹೋಗುವನೋ, ಕೆಲಸದ ನಿಮಿತ್ತ ಗೋಕುಲ ಹಠಾತ್ ಅತ್ತಲೇ ಬಂದುಬಿಡುತ್ತಿದ್ದ. ಇದೇ ರೀತಿ ಹಗಲು ಮುಪ್ಪಾಯಿತು.

ವಿನೋದ ತನ್ನ ಕೋಣೆಯೊಳಗೆ ಒಬ್ಬನೇ ಕುಳಿತಿದ್ದ. ಗೋಕುಲ ಕೈಯೊಳಗೊಂದು ಹಾಳೆ ಹಿಡಿದುಕೊಂಡು ಹೋಗಿ ನಿಂತ. ಅಕಾರಣವಾಗಿ

ಒಣನಗೆ ನಗುತ್ತ ಮಾತನಾಡಿದ: "ಕಲಕತ್ತೆಯ ನಿವಾಸ ಬಿಟ್ಟು ನೀ ಪಕ್ಕನೆ ಹೋಗಿ ಬಿಟ್ಟೆ— ಅಪ್ಪ ಸಾಯುವಾಗ— ಅದನ್ನು ನೀ ಕೇಳಿರಬೇಕು— ಅದೊಂದು ತಮಾಷೆ, ಮತ್ತೇನು!" ಮತ್ತೆ ಒಣನಕ್ಕು ಸಾಭಿನಯವಾಗಿ ಮಾತು ಮುಂದುವರಿಸಿದ: "ನಿನ್ನ ಅವಸ್ಥೆಯಾದರೂ ಏನಿದು— ಸ್ವಲ್ಪ ಸುದ್ದಿಯನ್ನಾದರೂ ತಿಳಿಸಬಾರದೆ?— ಇರಲಿ, ಇದನ್ನು ಮತ್ತೆ ಮಾತಾಡೋಣವಂತೆ-- ಈ ಕೆಲಸ ತೀರಲಿ— ಉಯಿಲು ಬರೆದಾಕ್ಷಣಕ್ಕೆ— ತಿಳಿಯಿತಿಲ್ಲವೋ ವಿನೋದ?—ಹಣ ಸ್ವಲ್ಪ ವ್ಯರ್ಥವಾಗಿ ವೆಚ್ಚವಾಗುವುದು— ತಿಳಿಯುತ್ತಿಲ್ಲವೋ?— ಇಲ್ಲಿಯ ಜನ ಲಫಂಗರು ನೀ ಬಲ್ಲೆ— ಹೌದಲ್ಲವೋ ತಮ್ಮ?— ಆದರೆ ಅಂತಹದೇನೂ ಇಲ್ಲ-- ತಂದೆಯೂ ಹೇಳಿ ಹೋಗಿದ್ದಾನೆ. ಧನಸಂಪತ್ತು ಅಣ್ಣ ತಮ್ಮಂದಿರಿಗಿಬ್ಬರಿಗೂ— ಇದೊಂದು ಬರೀ--ತಿಳಿಯಿತೇ?—ಅದು ಹೋಗಲಿ— ಇದರಿಂದೇನೂ ಆತಂಕವಿಲ್ಲ— ನನ್ನ ಪ್ರಕೃತಿಯೆ ಚೆನ್ನಾಗಿಲ್ಲ ತಮ್ಮಾ. ಈ ಕಬ್ಬಿಣ ಪೆಟ್ಟಿಗೆಯ ಕೀಲಿ ಕೈ ನೀ ತಗೋ. ಬ್ರಾಹ್ಮಣರಿಗೆ ಹೇಳಿದೆ, ಯಾರಿಗೆಷ್ಟು ದಾನ, ಯಾರಿಗೆಷ್ಟು ಮರ್ಯಾದೆ ಎಂಬುದನ್ನು ನೀ ನಿಶ್ಚಯಿಸಿ ಕೊಡದಿದ್ದರೆ, ಅದು ಇನ್ನಾರಿಗೂ ಸಾಧ್ಯವಿಲ್ಲ. ನನಗೆ ನಿನ್ನ ಕೂಡ ವಿಚಾರ ಮಾಡುವುದಕ್ಕೂ ಒಂದು ಗಳಿಗೆ ಪುರಸತ್ತಿಲ್ಲ--" ಎಂದು ಕಾಗದ, ಕೀಲಿಕೈ ಇದಿರಿಗಿಟ್ಟು ತಟ್ಟನೆ ಹೋಗುವುದರಲ್ಲಿದ್ದ. ವಿನೋದ ಅವುಗಳನ್ನು ಕೈಯಿಂದ ತಳ್ಳಿ ಬಿಟ್ಟು, "ನೀವು ಇದರೊಳಗೆ ನನ್ನನ್ನು ತೊಡಕಿಸಬೇಡಿರಿ. ಇವನ್ನು ನಾ ಮುಟ್ಟುವುದಿಲ್ಲ." ಎಂದ.

ಗೋಕುಲನ ಮುಖದ ನಗೆ ಹಾರಿಹೋಯಿತು ಅವನ ಇಡೀ ದಿನದ ಎಣಿಕೆ ಬಡಬಡಿಕೆಗಳು ಲುಪ್ತವಾಗತೊಡಗಿದವು. "ಮುಟ್ಟುವುದಿಲ್ಲ? ಏಕೆ?" ಎಂದ.

"ನನಗೇನಗತ್ಯ! ನಾ ಹೊರಗಿನವ, ಎರಡು ದಿವಸದವ, ಎರಡು ದಿನ ಇದ್ದು ಹೋಗುವವ."

" ಹೋಗುವವ ? "

" ಹೋಗಲೇ ಬೇಕು. ಅಲ್ಲದೆ ಇದೆಲ್ಲ ದುಡ್ಡಿನ ಕೆಲಸ. ನಾ ಬಡ ಕಂಗಾಲ. ಸರಿಯಾಗಿ ಲೆಕ್ಕ ಕೊಡಲಿಕ್ಕಾಗದಿದ್ದರೆ, ಕಳ್ಳನೆಂದು ನೀವೇ ನನ್ನನ್ನು ಪೋಲಿಸರಿಗೊಪ್ಪಿಸೀರಿ, ಜೇಲು ಕಾಣಿಸೀರಿ. "

ಉತ್ತರ ಕೊಡುವುದಕ್ಕೆ ಗೋಕುಲನ ತುಟಿಗಳು ಅದುರಿದವಷ್ಟೇ. ಅವನು ಬಗ್ಗಿ ಕಾಗದ, ಕೀಲಿಕೈ ತೆಗೆದುಕೊಂಡು ಹೊರಬಿದ್ದ. ಪಿತೃಶ್ರಾದ್ಧವನ್ನು ಒಳ್ಳೇ ಸಡಗರದಿಂದ ಮಾಡಿ ಹೌದೆನಿಸಿಕೊಳ್ಳಬೇಕೆಂಬ ಅವನಿಷ್ಟ, ಬಿಸಿಲುಗುದುರೆಯಂತೆ ಮಾಯವಾಯಿತು.

ಆವೊತ್ತು ಮುಂಜಾನೆಯಿಂದ ಅವನ ಹುರುಪಿಗೆ ಕೂಗಾಟಕ್ಕೆ ಮಿತಿಯಿರಲಿಲ್ಲ. ಆದರೆ ಸಂಜೆಯಾಗುವುದರೊಳಗೇ ಅವನು ತನ್ನ ಕೋಣೆಗೆ ಹೋಗಿ ಮಲಗಿದ. ಅವನ ಹೆಂಡತಿ ಕಂಡು ಬೆಪ್ಪುಬೆರಗಾದಳು " ಏನು ಮೈಯೊಳಗೆ ನೆಟ್ಟಗಿಲ್ಲವೆ? " ಎಂದು ಕೇಳಿದಳು.

" ಇಲ್ಲ ನೆಟ್ಟಗಿದ್ದೇನೆ " ಬೇಸರದ ದನಿಯಿಂದ ಅವನೆಂದ.

" ಹಾಗಾದರೆ ಹೀಗೇಕೆ ಮಲಗಿದ್ದೀರಿ ? "

ಗೋಕುಲ ಮಾತನಾಡಲಿಲ್ಲ.

" ಮೈದುನರೊಡನೆ ಮಾತುಗೀತಾಯಿತೇನು ? "

" ಇಲ್ಲ "

ಅವಳು ಹತ್ತಿರ ಬಂದು ಶಿಸ್ತಾಗಿ ಕುಳಿತುಕೊಂಡು ಪಿಸುನುಡಿದಳು: " ಮೈದುನರು ಏನೆನ್ನುತ್ತ ತಿರುಗುತ್ತಿರುವರು ಬಲ್ಲಿರಾ ? "

ಅವನು ಸುಮ್ಮನಿದ್ದ. ಅವಳು ಇನ್ನಷ್ಟು ಹತ್ತಿರಕ್ಕೆ ಸರಿದು ನುಡಿದಳು: " ತಂದೆಯ ಜಡ್ಡಿನ ಸುದ್ದಿಯೇ ಅವರಿಗೆ ಗೊತ್ತಿಲ್ಲವಂತೆ.—ಹಜಾರಿ ಬಾಗೋ ಇನ್ನೆಲ್ಲಿಯೋ—ಎಂಥ ಮೋಸಗಾರಿಕೆ ಬಲ್ಲಿರೋ ನಿಮ್ಮ ತಮ್ಮನದು ! "

" ಮೋಸ ಎಂಥಾದ್ದು ? ನಿನಗೆ ನಂಬಿಕೆಯಿಲ್ಲವೆ ? "

" ನನಗೆ ? ನಾನೇನು ಮಳ್ಳಿಯೆ ? ಕುತ್ತಿಗೆ ಮಟ ಗಂಗೆಯೊಳಗೆ ನಿಂತು ಹೇಳಿದರೂ ನನಗೆ ನಂಬಿಕೆಯಾಗುವುದಿಲ್ಲ. "

ಈ ಮಾತು ಗೋಕುಲನಿಗೆ ರುಚಿಸಲಿಲ್ಲ. ಪಾಸು ಮಾಡಿದ ಕುಲ ಪ್ರದೀಪನಾದ ತಮ್ಮನ ವಿರುದ್ಧ ಯಾರೇನು ಸ್ವಲ್ಪ ಆಡಿದರೂ ಅವನಿಗೆ ಕಳವಳವಾಗುತ್ತಿತ್ತು. ಆದರೆ ಇಂದವನು ಮನೋವ್ಯಥೆಯಿಂದ ನಿರ್ವಿಣ್ಣ ನಾಗಿದ್ದ, ಎಂತಲೇ ಸುಮ್ಮನಿದ್ದ. ಕೋಣೆಯೊಳಗೆ ದೀಪವಿತ್ತಾದರೂ ಬೆಳಕು ಮಕಾಳವಿತ್ತು. ಮನೋರಮೆಗೆ ಗಂಡನ ಮುಖಭಾವ ಚೆನ್ನಾಗಿ ಕಾಣಲಿಲ್ಲ. ಆವಳೆಂದಳು: "ಜೋಕೆ, ಬಹಳ ಜೋಕೆ ! ಇನ್ನು ಅನೇಕ ಮೋಸತಂತ್ರ ನಡೆಯಬಹುದು. ಯಾವುದಕ್ಕೂ ಕಿವಿಗೊಡಬೇಡಿರಿ. ಅಪ್ಪ ನನ್ನು ಕೇಳದೆ ಒಂದೂ ಕೆಲಸ ಮಾಡಬೇಡಿರಿ. ನಾಳೆ ಬೆಳಗಿನ ಗಾಡಿಗೆ ಅವರು ಬರುವರು—ನಾ ಪರಿಪರಿಯಿಂದ ಪತ್ರ ಬರೆದಿದ್ದೇನೆ. ಏನೇ ಎನ್ನಿರಿ, ಅಪ್ಪ ಬರುವವರೆಗೆ ನನ್ನ ಭಯ ಹೋಗುವುದಿಲ್ಲ. "

" ನಿಮ್ಮಪ್ಪ ಬರುವರೇನು ? " ಗೋಕುಲ ಎದ್ದು ಕುಳಿತು ಕೇಳಿದ.

" ಬರುವುದಿಲ್ಲವೆ ? ಅವರು ಬರದಿದ್ದರೆ ಈ ಹೊತ್ತಿನಲ್ಲಿ ಸಂಬಾಳಿಸು ವವರಾರು ? ನಿಮತಲಾದವರ ನುಂಡಿ ಇದೆಯಲ್ಲ, ಅದಕ್ಕೆ ಆಧಾರ ಸರ್ವಸ್ವ ಅವರೇ. ಆದರೆ ಅದರ ದೆಸೆಯಿಂದ ಈ ವಿಪತ್ತಿನಲ್ಲಿ ಮಗಳು-ಅಳಿಯರನ್ನು ಸರ್ವಥಾ ಕೈಬಿಡಲಾರರು. "

ಗೋಕುಲ ನೀರವವಾಗಿ ಕೇಳತೊಡಗಿದ. ಮನೋರಮೆಗೆ ಹರ್ಷ ವಾಯಿತು, ಉತ್ಸಾಹ ಏರಿತು. ಅವಳು ಹೇಳತೊಡಗಿದಳು : " ನಿಮ್ಮ ಅಂಗಡಿ ಮುಂಗೋಟಿ ಎಲ್ಲಾ ಅಪ್ಪನ ಕೊರಳಿಗೆ ಕಟ್ಟಿಬಿಡಿರಿ. ಮತ್ತಾರನ್ನೂ ನೋಡುವ ಅಗತ್ಯವಿಲ್ಲ. ಯಾರಾದರೂ ಕೇಳಿದರೆ ನನಗೇನು ಗೊತ್ತಿಲ್ಲ,

ಅಪ್ಪನನ್ನು ಕೇಳಿರಿ ಎಂದರಾಯಿತು. ಸರಿ. ಮೈದುನರಾಗಲಿ ಮತ್ತಾರೇ ಆಗಲಿ, ಅವರ ಮುಂದೆ ಕಂಯ್‌ಕುಂಯ್ ಎನ್ನಲಾರರು. ತಿಳಿಯಿತಿಲ್ಲವೋ?"

ಮನೋರಮೆ ಅರ್ಥಪೂರ್ಣ ದೃಷ್ಟಿಯಿಂದ ಪತಿಯ ಮೋರೆ ನೋಡಿದಳು. ಆ ಮಸಕು ಬೆಳಕಿನಲ್ಲಿ ಆ ದೃಷ್ಟಿ ಗೋಕುಲನಿಗೆ ಕಂಡಿತೋ ಇಲ್ಲವೋ ಹೇಳಲಿಕ್ಕೆ ಬರುವಂತಿಲ್ಲ. ಆದರೆ ಹೌದೆನ್ನಲಿಲ್ಲ; ಅಲ್ಲವೆನ್ನಲಿಲ್ಲ. ಆಮೇಲೆ ಮನೋರಮೆ ಇನ್ನೆಷ್ಟೋ ಒಳ್ಳೊಳ್ಳೆಯ ಮಾತನಾಡಿದಳು. ಆದರೂ ಅವನಿಂದ ಯಾವ ಉತ್ತರವೂ ಬರಲಿಲ್ಲ. ಗಾಳಿ ಯಾವ ದಿಕ್ಕಿಗೆ ಬೀಸುತ್ತಿರುವುದೆಂಬುದನ್ನು ಅರಿಯಲಾರದೆ ಮನೋರಮೆ ಆ ರಾತ್ರಿಯ ಮಟ್ಟಿಗಂತೂ ವಿರಮಿಸಿದಳು.

ಮುಂಜಾನೆ ಗೋಕುಲ ಭವಾನಿಯ ಕೋಣೆಯೊಳಗೆ ಹೋಗಿ, "ಅವ್ವಾ, ಕಬ್ಬಿಣಪೆಟ್ಟಿಗೆಯ ಕೀಲಿಯ ಕೈ ಗೋಕುಲ ನಿನ್ನ ಹತ್ತಿರ ಇಟ್ಟು ಹೋಗಿದ್ದಾನೆಯೆ?" ಎಂದು ಕೇಳಿದ.

"ಇಲ್ಲವಲ್ಲ."

ಕೈ ಗೋಕುಲನ ಹತ್ತಿರವೇ ಇತ್ತು. ಮನಸಿನೊಳಗೆ ಏನೋ ಎಣಿಸಿಕೊಂಡು ಸುಳ್ಳುಸುಳ್ಳೇ ಹೀಗೆ ಕೇಳಿದ್ದ. ಇಂತಹ ವಸ್ತುವನ್ನು ವಿನೋದನ ಕೈಯಲ್ಲಿ ಕೊಟ್ಟೆನೆಂದರೆ ಅವ್ವ ನಿಜವಾಗಿಯೂ ವ್ಯಾಕುಲಗೊಳ್ಳುವಳೆಂದು ಅವನು ಭಾವಿಸಿದ್ದ. ಆದರವಳ ಸಂಕ್ಷಿಪ್ತ ಉತ್ತರದಿಂದ ಅವನ ಕೌಶಲವೆಲ್ಲ ಅಳಿದುಹೋಯಿತು. ಮುಖ ಮ್ಲಾನವಾಯಿತು. ಮೆಲ್ಲಮೆಲ್ಲನೆ ನುಡಿದ "ಯಾರಿಗೆ ಗೊತ್ತು, ಅವನೇ ಎಲ್ಲಿಯಾದರೂ ಇಟ್ಟನೋ ನಾನೇ ಎಲ್ಲಿಯಾದರೂ ಇಟ್ಟುಬಿಟ್ಟೆನೊ!"

ಭವಾನಿ ಮಾತನಾಡಲಿಲ್ಲ. ತುಂಬಿದ ಮನೆಯೊಳಗೆ ಸಂದುಕದ ಕೈ ಸಿಗಲೊಲ್ಲದೆಂಬುದನ್ನು ಕೇಳಿ ಅವಳು ಉದ್ವೇಗಗೊಳ್ಳಲಿಲ್ಲ; ತಾನು ಹೀಗೆ ಸಂಸಾರದಲ್ಲಿ ನಿರ್ಲಿಪ್ತಳಾಗಿರುವುದು ಗೋಕುಲದ ಹೃದಯವನ್ನು ಎಷ್ಟರ

ಮಟ್ಟಿಗೆ ನೋಯಿಸುತ್ತಿನೆ ಎಂಬುದನ್ನು ಗಮನಿಸಲಿಲ್ಲ! ಅದರಿಂದ ಏನು ಹೇಳ ಬೇಕು, ತಾಯಿಯನ್ನು ಸಂಸಾರದ ವಿಷಯದಲ್ಲಿ ಹೇಗೆ ಉತ್ಸಾಹಿತಳನ್ನಾಗಿ ಮಾಡಬೇಕು ಎಂಬುದು ಗೋಕುಲನಿಗೆ ತಿಳಿಯದಾಯಿತು. ಸ್ವಲ್ಪ ಸಮಯ ನೀರವವಾಗಿದ್ದು, "ಶಂಭು ಮತ್ತು ದರಬಾರಿ ಅತ್ತಿಪ್ಪನನ್ನು ಕರೆಯಲಿಕ್ಕೆ ಹೋದವರು ಇನ್ನೂ ಬಂದಿಲ್ಲ." ಎಂದ.

"ಏಕೆ ಬರಲಿಲ್ಲವೋ ಏನೋ." ಭವಾನಿ ಕೋಮಲ ಸ್ವರದಿಂದ ನುಡಿದಳು.

"ಕರೆಯ ಕಳಿಸೆಂದು ನೀ ಹೇಳಿದ್ದು ಬಹಳ ಒಳ್ಳೆಯದು ಮಾಡಿವೆ. ಈಗ ಬರದಿದ್ದರೂ ಅವರಿಷ್ಟ. ನನ್ನ ಕಡೆಗಂತೂ ದೋಷವಿಲ್ಲ. ಅವ್ವಾ, ನೀ ಎಷ್ಟು ದೂರ ವಿಚಾರ ಮಾಡುವೆಯವ್ವಾ, ನನಗೆ ಬಹಳ ಅಗಾಧ ಎನಿಸುತ್ತದೆ. ನೀ ಇಲ್ಲದಿದ್ದರೆ ನಮಗೆ—"

ಭವಾನಿ ಈಗಲೂ ಮೌನಿ. ಅವಳ ಗಂಭೀರ ವಿಷಣ್ಣ ಮುಖದಲ್ಲಿ ಆ ಮಾತಿನಿಂದ ಸಂತೋಷ-ಆನಂದ ಏನೂ ಒಡಮೂಡಲಿಲ್ಲ. ಗೋಕುಲ ಬಹಳ ಹೊತ್ತು ಸುಮ್ಮನೆ ನಿಂತುಕೊಂಡು ಆಮೇಲೆ ಸಾವಕಾಶವಾಗಿ ಹೊರಟುಹೋದ.

ಹೊರಗೆ ಬರುತ್ತಲೇ ಗೋಕುಲ ಬೆಚ್ಚಿಬಿದ್ದ: ಇಷ್ಟರೊಳಗೇ ಜಿಲ್ಲೆಯ ಹೊಸ ಡೆಪ್ಯುಟಿ, ಕೆಲ ಜನ ವಕೀಲರು, ಮೊಕ್ತಾರರು ಆಮಂತ್ರಣದಂತೆ ಬಂದಿದ್ದರು. ವಿನೋದ ಅವರ ಪಕ್ಕದಲ್ಲಿ ನಯವಾಗಿ ಮಾತನಾಡುತ್ತ ಕುಳಿತಿದ್ದ. ಆ ಶಿಷ್ಟ ಸದ್ಗೃಹಸ್ಥರಿಗೆ ತನ್ನ ತಮ್ಮನ ಪರಿಚಯ ಮಾಡಿಕೊಡಬೇಕೆಂದು ಅವನಿಗೆ ಬಹಳ ಚಡಪಡಿಕೆ. ಅದಕ್ಕೆ ಸಮಯ ಕಾಯುತ್ತಿದ್ದ. ಆದರೆ ಅವ ನಿದುರಿಗೇ ಅವನ ವಿದ್ಯೆಯ ವಿಷಯವನ್ನು ತಿಳಿಸುವುದು ಸಾಧ್ಯವಿರಲಿಲ್ಲ;— ಅದರಿಂದ ವಿನೋದ ಸಿಟ್ಟಿಗೇಳುತ್ತಿದ್ದ.

ಗೋಕುಲ ಕೆಲ ಹೊತ್ತು ಹಿಂದೆ ಮುಂದೆ ನೋಡಿ, ಅಧಿಕಾರಿಗಳ ಎದುರಿಗೆ ಹೋಗಿ ವಂದಿಸಿ, ಅತ್ಯಂತ ವಿನಯದಿಂದ ನುಡಿದ: "ಇವನೇ ನನ್ನ ತಮ್ಮ ವಿನೋದ; ಆನರ್ಸ್ ಗ್ರ್ಯಾಜುಏಟ್!"

ವಿನೋದ ಮುನಿಸುಗಣ್ಣಿಂದ ಅಣ್ಣನ ಮೋರೆ ನೋಡಿದ. ಗೋಕುಲ ಅದನ್ನು ಗಮನಿಸದೆ ಕೈಜೋಡಿಸಿ ಮಾತನಾಡತೊಡಗಿದ: "ನೀವು ಬಂದದ್ದು ನಮ್ಮ ಏಳುತಲೆಯ ಪುಣ್ಯ—ವಿನೋದ, ಸಾಹೇಬರ ಸಂಗಡ ಇಂಗ್ಲಿಷಿನಲ್ಲಿ ಏಕೆ ಮಾತನಾಡುವದಿಲ್ಲ? ಅವರು ಸಾಹೇಬರು, ಹುಜೂರವರು. ಬಂಗಾಲಿಯಲ್ಲಿ ಮಾತನಾಡುವುದು ಅವರಿಗೆ ಚೆಂದವೆ? ನಾಲ್ಕು ಜನ ಕೇಳಿದರೆ ಏನೆಂದಾರು!"

ಕೂಡಿದ ಸದ್ಗೃಹಸ್ಥರು ಮುಖವೆತ್ತಿ ನೋಡಿದರು. ಡೆಪ್ಯುಟಿ ಸಂಕೋಚಗೊಂಡು ಕುಂಠಿತರಾದರು. ವಿನೋದನಿಗೆ ಅಸಹ್ಯ ಲಜ್ಜೆಯಾಯಿತು. ಅಣ್ಣನ ಸ್ವಭಾವ ಅವನಿಗೆ ಗೊತ್ತಿತ್ತು. ತಡೆಯದಿದ್ದರೆ ಅವನು ಎಲ್ಲಿಗೆ ನಿಲ್ಲುವನೆಂಬುದು ನಿಯಮವಿಲ್ಲ. ವಿನೋದ, "ಒಂದು ಮಾತು ಕೇಳುವದಿದೆ" ಎಂದು ಅಣ್ಣನನ್ನು ಕೈಹಿಡಿದು ಒತ್ತಟ್ಟಿಗೆ ಎಳೆದುಕೊಂಡು ಹೋದ. "ಅಣ್ಣಾ ನನ್ನನ್ನೇನು ನಿಂತಕಾಲಮೇಲೆ ಮನೆಯಿಂದ ಹೊರಡಿಸಬೇಕೆನ್ನುತ್ತೀಯಾ? ಹೀಗೆ ಮಾಡಿದರೆ ಒಂದು ಕ್ಷಣವೂ ನಿಲ್ಲುವುದು ಶಕ್ಯವಿಲ್ಲ," ಎಂದ.

"ಏಕೆ, ಏಕೆ ತಮ್ಮಾ?" ಎಂದ ಗೋಕುಲ ಗಾಬರಿಯಿಂದ.

"ನಾ ಯಾವಾಗಿನಿಂದಲೂ ಹೇಳುತ್ತಿದ್ದೇನೆ: ನಿನ್ನೀ ಅತ್ಯಾಚಾರ ಸಹಿಸಲಾರೆ ಎಂದು. ಆದರೂ ನನ್ನನ್ನೇನು ನೀ ಬಿಡುವಂತೆ ಕಾಣುವದಿಲ್ಲ. ನನ್ನಂತೆ ಪಾಸು ಮಾಡಿದವರು ಬೀದಿ ಬೀದಿಯೊಳಗೂ ಅಲೆಯುತ್ತಿದ್ದಾರೆ!" ಎಂದು ವಿನೋದ ಕ್ಷೋಭದಿಂದ ಅಭಿಮಾನದಿಂದ ಮೋರೆ ಗಂಟುಹಾಕಿ ತನ್ನ ಸ್ಥಳಕ್ಕೆ ಬಂದು ಕುಳಿತ.

ಗೋಕುಲ ನಾಚಿಕೆಯಿಂದ ಇಷ್ಟಾಗಿ ಬೇರೆ ಕಡೆಗೆ ಒಟಗುಡುತ್ತ-ಬಹುಶಃ ಇನ್ನೊಮ್ಮೆಂದೂ ಹೀಗೆ ಮಾಡುವದಿಲ್ಲವೆಂದೆನ್ನುತ್ತ—ಹೋದ. ಆದರೂ ಒಂದರ್ಧ ಗಂಟೆಯೊಳಗೇ ಅವನು ಒದರೊದರಿ ಆಳನ್ನು ಎಚ್ಚರಿಸುತ್ತಿರುವುದು ವಿನೋದನಿಗೆ ಮತ್ತನೇಕರಿಗೆ ಕೇಳಿಸಿತು: "ಚಿಕ್ಕ ಬಾಬುವಿನ ಆನರ್ ಗ್ರ್ಯಾಜುಯೇಟಿನ ಬಂಗಾರದ ಪದಕವನ್ನು ಹಿಡಿಹಿಡಿದು ಕೆಡಿಸಿಗಿಡಿಸೀರಿ!"

ಡೆಪುಟಿ ಮುಗುಳು ನಕ್ಕು ವಿನೋದನ ಮುಖ ನೋಡಿ ಮೋರೆ ತಿರುಗಿಸಿದರು.

೬

ಸಿಮತಲಾ ಮಂಡಿಯನ್ನು ಭಣಭಣಗೊಳಿಸಿ ಗೋಕುಲನ ಮಾವ ಬಂದರು. ನರೆತ ತಲೆಗೂದಲು, ಕರಿ ಮೀಸೆ, ಗಿಡ್ಡ ದೃಢ ಶರೀರ. ಒಳ್ಳೆಯ ಪಕ್ಕಾ ಮನುಷ್ಯ. ಮಂಡಿಯಲ್ಲಿ ಕೆಲಸ ಮಾಡುತ್ತಿದ್ದ ಹುಡುಗರು ಅವರಿಗೆ ಹಿಂದೆ 'ಕಾಗೆ' ಎನ್ನುತ್ತಿದ್ದರು. ಶ್ರಾದ್ಧದ ಮಾನೆಗೆ ಒಂದು ಗಳಿಗೆಯೊಳಗೆ ಅವರು ಸ್ವಾಮಿಯಾದರು; ಒಂದೆರಡು ಗಂಟೆಗಳೊಳಗೇ ಊರವರೆಲ್ಲರನ್ನೂ ಮಾತಾಡಿಸಿಕೊಂಡರು. ಕಾರ್ಯದಕ್ಷರಾದ ಲೆಕ್ಕಗಾರರಾದ ಮಾವನನ್ನು ಕಂಡು ಗೋಕುಲನಿಗೆ ಹರುಷ. ಬಂಧು-ಬಳಗದವರಿಗೆಲ್ಲ ಅಳಿಯ-ಮಗಳ ಬಲವಂತದ ಕರೆಯನ್ನು ಅಲ್ಲಗಳೆಯಲಾರದೆ ವ್ಯವಹಾರವನ್ನು ಕೈಗೆ ತೆಗೆದು ಕೊಳ್ಳಲು ದಯವಿಟ್ಟು ಬಂದಿದ್ದಾರೆಂದು ತಿಳಿದು ಬಂದಿತು.

ರಾತ್ರಿ ಒಂದು ಪ್ರಹರಕ್ಕೆ ಊಟ ಉಡಿಗೆ ಆದಮೇಲೆ "ಯಜಮಾನರು ಕರೆಯುತ್ತಾರೆ" ಎಂದು ಆಳು ಹೇಳಿದ. ಗೋಕುಲ ಸಂಭ್ರಮದಿಂದ ಹೋದ. ಮಾವ ಮಹಾಶಯ--ಸಿಮಾಯಿ ರಾಯ -- ಬಹುಮೂಲ್ಯ ಕಾರ್ಪೆಟಿನ ಮೇಲೆ ಕುಳಿತು ಮೊಮ್ಮಗಳೊಂದಿಗೆ ಉಪಹಾರ ನಡೆಸಿದ್ದ. ಹತ್ತಿರ ಕುಳಿತು ಮಗಳು ಮಲ ಅತ್ತೆಯ ಸತ್ಯ ಪರಿಚಯವನ್ನು ಗುಣುಗುಣಿಸುತ್ತಿದ್ದಳು.

ಮಾವ ಮಹಾಶಯ ಹಾಲಿನ ಬಟ್ಟಲನ್ನು ಒಂದೇ ಗುಟುಕಿನಲ್ಲಿ ಬರಿದು ಮಾಡಿ, ಅದರಂಚಿನಿಂದ ಮೀಸೆ ನೀವಿಕೊಂಡ. ಮುಖವೆತ್ತಿ ನೋಡಿ, "ತಮ್ಮಾ ನಿನ್ನನ್ನು ಒಂದು ಮಾತು ಕೇಳುವುದಿದೆ. ಮುತ್ತು ಒಡೆದರೆ ಹೋಯಿತು, ಮಾತು ಆಡಿದರೆ ಹೋಯಿತು; ತಿರುಗಿ ಬಂದೀತೇ?" ಎಂದ.

ಗೋಕುಲ ಹಿಂದು ಮುಂದರಿಯದೆ, "ಇಲ್ಲ" ಎಂದ.

ನಿಮಾಯಿ ಮಗಳ ಕಡೆ ನೋಡಿ ಗಂಭೀರವಾಗಿ ಸವಿನಗೆ ನಕ್ಕು ಕೇಳಿದ: "ಎಂದಮೇಲೆ?"

ಆಕಾಶ ಪಾತಾಳ ಏಕಮಾಡಿ ಹುಡುಕಿದರೂ ಗೋಕುಲನಿಗೆ 'ಆ ಮೇಲೆ' ಎಂಬುದಕ್ಕೆ ಉತ್ತರ ಬೇರೆ ಸಿಕ್ಕಲಿಲ್ಲ; ಸುಮ್ಮನಿದ್ದ. ನಿಮಾಯಿ, ತನ್ನ ಭೂಮಿಕೆಯನ್ನು ಸ್ಥಿರಗೊಳಿಸಿಕೊಳ್ಳುವುದಕ್ಕಾಗಿ ಹೇಳಿದ: "ತಮ್ಮಾ ನೀವಿಬ್ಬರೂ ಹುಡುಗರು; ಬಿರುಗಾಳಿಯಲ್ಲಿ ನಾವು ನಡೆಸಲು ನನ್ನನ್ನು ಅತ್ತು ಕರೆದು ಕರೆಸಿಕೊಂಡಿರಿ. ನಾ ಇದನ್ನು ನಡೆಸಬಲ್ಲೆ, ನಡೆಸುವೆ. ಆದರೆ ನೀವು ಮಾತ್ರ ಹೊಯ್ದಾಡಬಾರದು; ಕೂಡ್ರೆಂದಲ್ಲಿ ಕೂಡ್ರಬೇಕು, ನಿಲ್ಲೆಂದಲ್ಲಿ ನಿಲ್ಲಬೇಕು. ಎಂದರೇ ಈ ಕಡಲಿನ ದಡಕ್ಕೆ ಹತ್ತಬಹುದು. 'ವಿನೋದ ಹಾಜಾರಿ ಬಾಗಿನಲ್ಲಿದ್ದ' ಎಂದು ಸಿಕ್ಕಸಿಕ್ಕವರ ಮುಂದೆ ಅಸಂಬದ್ಧವಾಗಿ ಹೇಳುತ್ತ ತಿರುಗುತ್ತೀಯಲ್ಲ, ಇದೇನು ನಡೆಸಿದ್ದೀ? ಇದು ನಿನ್ನ ಕಾಲಿಗೆ ನೀನೇ ಕೊಡಲಿ ಹಾಕಿಕೊಂಡಂತೆ ಎಂಬುದನ್ನೇನಾದರೂ ವಿಚಾರ ಮಾಡಿದೆಯಾ?"

ತಂದೆಯ ವಕ್ತೃತ್ವಕ್ಕೆ ಹಿಗ್ಗಿದಳು ಮಗಳು. ಮೆಲ್ಲಗೆಂದಳು. "ಹೌದು, ಅಪ್ಪಾ ಹೀಗೆಯೇ ನಡೆದಿದೆ. ಎಂತಲೇ ನಿನ್ನನ್ನು ಕರೆಸಿದ್ದು. ನಮಗೇನೂ ತಿಳಿಯುವುದಿಲ್ಲ; ಇನ್ನು ನೀ ಹೇಳಿದಂತೆ ನಡೆಯುವುದು. ನೀ ಏನು ಮಾಡುತ್ತೀ ಏನಿಲ್ಲ ಎಂದು ಕೂಡ ನಾವು ಕೇಳುವುದಿಲ್ಲ."

ತಂದೆಗೆ ಸಂತಸವಾಯಿತು. "ಇದೇ ನನಗೆ ಬೇಕಾದ್ದಮ್ಮಾ. ಖಟ್ಲೆ ಪೋಕಲೆ ಎಂಬುದು ಭಯಂಕರ ವಿಷಯ. 'ನಿಮ್ಮ ಮನೆಯೊಳಗೆ ಖಟ್ಲೆ ಹೋಗಲಿ' ಎಂಬ ಶಾಪ ಜನರಲ್ಲಿ ರೂಢವಾಗಿದೆ, ಕೇಳಿಲ್ಲವೆ? ಅದೇ ಖಟ್ಲೆ ನಿಮ್ಮ ಮನೆಯಲ್ಲಿ ಹೊಕ್ಕಿದೆ ಈಗ. ನನ್ನದೊಳ್ಳೆಯ ಪಕ್ಕಾ ತಲೆ, ಎಂತಲೇ ನಾನೀ ಸಾಹಸಕ್ಕೆ ಕೈ ಹಾಕಿಪ್ಪೇನೆ, ನಿಮ್ಮನ್ನು ಇದರೊಳಗಿಂದ ದಡಗಾಣಿಸಿಯೇ ಹೋಗುತ್ತೇನೆ. ಇದಕ್ಕಾಗಿ ನನ್ನದು ಬೇಕಾದ್ದಾಗಲಿ! ಇವರನ್ನೆಲ್ಲ ಒಬ್ಬೊಬ್ಬರನ್ನೇ ಕತ್ತು ಹಿಡಿದು ಹೊರತಳ್ಳಿಬಿಡುತ್ತೇನೆ, ಎಂದರೇ ನನ್ನ ಹೆಸರು ನಿವೂಾಯಿರಾಯ!" ಎಂದ. ಆಗವನ ಮುಖದಲ್ಲಆವಿರ್ಭವಿಸಿದ ಗರ್ವಭಾವ, ವಾಟರ್ಲೂ ಕದನವನ್ನು ಗೆದ್ದುಬಂದ ವೆಲಿಂಗ್ಟನ್ನನ ಮುಖದ ಮೇಲೂ ಇದ್ದಿರಲಾರದು.

ಗೋಪಾಲ ಚಾಚಿ ಹೊರಗೆ ನೋಡಿ, "ತಂಗೀ ಮನೂ, ಇಲ್ಲಿಯೇ ಒಂದಿಷ್ಟು ನೀರು ತಂದು ಕೊಡು, ಕೈ ತೊಳೆದುಕೊಳ್ಳುವೆ. ಹಾಗೆಯೇ ಒಂದಿಷ್ಟು ನೋಡಿಕೊಂಡು ಬಾ, ಹೊರಗೆ ಯಾರಾದರೂ ಕಿವಿಗೊಟ್ಟು ನಿಂತುಗಿಂತಾರೇನೋ. ಹೇಳಿಕೇಳಿ ಶತ್ರುಪುರಿಯಿದು!" ಎಂದ.

ಮನೋರಮೆ ಹೇಳಿದಂತೆ ಮಾಡಿ ಬಂದು ತನ್ನ ಸ್ಥಳದಲ್ಲಿ ಕುಳಿತಳು. ಗೋಕುಲ ವಿಹ್ವಲ ವಿವರ್ಣ ಮುಖದಿಂದ ಹೆಂಡತಿಯ ಮುಖವನ್ನೊಮ್ಮೆ ಮಾವನ ಮುಖವನ್ನೊಮ್ಮೆ ನೋಡತೊಡಗಿದ. ಈ ಒಳಗಾಗಿ ತಂದೆ-ಮಕ್ಕಳಲ್ಲಿ ಏನೇನು ಮಾತಾಯಿತೆಂಬುದು ಅವನಿಗೆ ವರ್ಣಮಾತ್ರವೂ ಗೊತ್ತಿಲ್ಲ. ಇದು ಯಾರ ವಿಷಯ, ಯಾರ ಮನೆಯಲ್ಲಿ ಖಟ್ಲೆ, ಕತ್ತು ಹಿಡಿದು ತಳ್ಳುವುದು ಯಾರನ್ನು -- ಮೊದಲಾದ ಸಂಜ್ಞೆಗಳ ತಾತ್ಪರ್ಯವನ್ನರಿಯಲಾರದೆ ಅವನೊಮ್ಮೆಲೆ ವಿಮೂಢನಾದ. "ಏಕೆ ನಿಂತುಕೊಂಡೆ ತಮ್ಮಾ? ಒಂದಿಷ್ಟು ಸರಿಯಾಗಿ ಕೂತುಕೊ; ನಾಲ್ಕು ಮಾತಾಡುವ," ಎಂದ ಮಾವ.

ಗೋಕುಲ ನಿಂತಲ್ಲಿಯೇ ಕುಳಿತ. ಮಾವ ಆರಂಭಿಸಿದ: "ಇದೇ ನಿಮಗೆ ತಕ್ಕ ವೇಳೆ. ಮಾಡುವುದು ಈಗಲೇ ಮಾಡಬೇಕು. ಮನೆ ಹಾಳು

ಮಾಡುವ ಖಟ್ಲೆಯೊಂದು ಈಗ ಸ್ಪಷ್ಟವಾಗಿ ಕಾಣುತ್ತಲಿದೆ. ಆದರೆ ನಾನದಕ್ಕೆ ಹೆದರುವುದಿಲ್ಲ, ಹಾಟಖೋಲಾದ ಯದು ವಕೀಲರು ಮತ್ತು ತಾರಣೀ ಮೊಕ್ತಾರರು ನನ್ನದೆಲ್ಲ ಬಲ್ಲರು. ನಿಮಾಯಿ ರಾಯನ ಹೆಸರು ಕೇಳಿದರೆ ಎಂಥೆಂಥ ವಕೀಲ ಬ್ಯಾರಿಷ್ಟರರ ಮೋರೆಯೂ ಒಣಗಿ ಹೋಗುವುದು. ಇವನಂತೂ ತಲೆಯ ಮೇಲಿನ ಮಾಸ ಆರದ ಪೋರ; ಒಂದು ನಾಕು ಪುಟ ಇಂಗ್ಲಿಷು ಓದಿದ್ದಾನು ಅಷ್ಟೆ!"

ಇನ್ನೂ ಸುಮ್ಮನಿರಲಾಗದೆ ಗೋಕುಲ ಪ್ರಶ್ನಿಸಿದ: "ಯಾರ ವಿಷಯ ಮಾತಾಡುತ್ತಿದ್ದೀರಿ? ಯಾವ ಖಟ್ಲೆ?"

ಅವಾಕ್ಕಾಗುವುದು ಈಸಲ ಮಾವನ ಪಾಲಿಗೆ ಬಂತು. ಅವನು ಮಿಕಿ ಮಿಕಿ ನೋಡತೊಡಗಿದ. ಮನೋರಮೆ ವ್ಯಾಕುಲಳಾಗಿ ಗಡುಸುದನಿಯಲ್ಲಿ ನುಡಿದಳು: "ನೋಡಿದೆಯಾ ಅಪ್ಪಾ, ನಾ ಹೇಳಿದಂತಿಲ್ಲವೆ? ಯಾರ ಖಟ್ಲೆ ಎಂದು ಕೇಳುತ್ತಾರೆ! ನಿನ್ನ ಪಾದದಾಣೆ ಅಪ್ಪಾ, ಇವರಂಥ ಸರಳ ಜನ ಭರತಖಂಡದೊಳಗೇ ಇಲ್ಲ! ಇವರನ್ನು ಠಕ್ಕಿಸುವುದು ಮೈದುನರಿಗೆ ದೊಡ್ಡ ಮಾತೇ? ನೀ ಬಂದೆಯೆಂತಲೇ ಧೈರ್ಯ. ಇಲ್ಲದಿದ್ದರೆ ನಿನ್ನ ಮೊಮ್ಮಕ್ಕಳಿಗೆ ವನವಾಸವೇ ಗತಿ!"

ನಿಮಾಯಿ ಉಸಿರ್ಗರೆದು "ಹಾಗೇ ಸರಿ ಹೋಗಲಿ, ಇನ್ನಾ ಭಯವಿಲ್ಲ-- ನಾ ಬಂದ ಮೇಲೆ. ನಾ ಮೊದಲು ನಿಮ್ಮ ಮಂಡಿಯ ಆ ಚಕ್ಕೋತ್ತಿ ಗಿಕ್ಕೋತ್ತಿ ಅವರನ್ನೆಲ್ಲಾ ತೆಗೆದೊಗೆಯುವೆ. ಅವರೆಲ್ಲ ಒಳಗೊಳಗೆ ವಿನೋದನ ಪಕ್ಷದವರು. ನಾ ನೆಳಲು ನೋಡಿಯೇ ಮನುಷ್ಯನ ಮನಸು ತಿಳಿಯಬಲ್ಲೆ!" ಎಂದು ಮಗಳನ್ನೊಮ್ಮೆ ಅಳಿಯನನ್ನೊಮ್ಮೆ ನೋಡತೊಡಗಿದ.

ಮನೋರಮೆ ತತ್‌ಕ್ಷಣ ಸಮ್ಮತಿ ಇತ್ತಳು: "ಈಗಿಂದೀಗ! ನನಗೇನು ಗೊತ್ತಿಲ್ಲವೇ ಅಪ್ಪಾ, ಎಲ್ಲಾ ಗೊತ್ತಿದೆ. ಏನು ಮಾಡಲಿ, ತಿಳಿದೂ ತಿಳಿದೂ

ಪೆದ್ದಿಯಾಗಿ ಕೂತಿದ್ದೇನೆ. ನೀ ಬೇಕಾದವರನ್ನು ತೆಗೆ, ಬೇಕಾದವರನ್ನಿಟ್ಟು ಕೋ, ನಾವು ಬ್ರ ಎನ್ನುವುದಿಲ್ಲ."

ಗೋಕುಲನಿಗೆ ಈಗೆಲ್ಲ ತಿಳಿಯಿತು, ತಮ್ಮ ವಿನೋದ ತನ್ನ ವಿರುದ್ಧ ಖಟ್ಲೆಯ ಸಂಚು ನಡೆಸಿದ್ದಾನೆಂದು; ಇವರಿಗೆ ಅವನ ಸಂಚೆಲ್ಲ ಗೊತ್ತಾಗಿದೆ, ತಾನು ಮಾತ್ರ ಹುಚ್ಚರಂತೆ ಅವನನ್ನು ಮೆಚ್ಚಿಸಲು ಯತ್ನಿಸುತ್ತಿರುವನೆಂದು. ಅವನಲ್ಲಿ ಕ್ರೋಧಾಗ್ನಿ ಬ್ರಹ್ಮರಂಧ್ರ ಭೇದಿಸುವಂತೆ ಪ್ರಜ್ವಲಿಸಿತು— ಆದರೆ ಒಂದೇ ಒಂದು ನಿಮಿಷ. ಮರು ನಿಮಿಷವೇ ಅದು ಆರಿ ಅಂಗಾರವಾಗಿ ಕಗ್ಗತ್ತಲೆ ಅವನ ದೃಷ್ಟಿಯನ್ನು, ಅವನ ಬುದ್ಧಿಯನ್ನು, ಅವನ ಚೈತನ್ಯವನ್ನು ಕೆಡಿಸಿಬಿಟ್ಟಿತು. ಅವನ ಕಿವಿಯೊಳಗೆ ನೂರಾರು ಜನ "ವಿನೋದ ನಿನ್ನ ವಿರುದ್ಧ ಖಟ್ಲೆ ಹೂಡಿದ್ದಾನೆ, ಎಂದು ಕೂಗಾಡುತ್ತಿರುವಂತಾಯಿತು. ನಿಮಾಯಿ ಹೇಳಿದ: "ದುಡ್ಡಿನ ಮೋರೆ ನೋಡಬಾರದು ತಮ್ಮಾ, ಸಾಕ್ಷಿಗಳ ಕೈ ಬಿಸಿಯಾಗಬೇಕು. ಅವರ ಕೈಯೊಳಗೇ ಇರುವುದೆಲ್ಲ ತಿಳಿಯಿತೆ?"

ಗೋಕುಲ ತಲೆ ತಗ್ಗಿಸಿಕೊಂಡು ಕಲ್ಲಿನಂತೆ ಕುಳಿತಿದ್ದ. ತಿಳಿಯಿತೋ ಇಲ್ಲವೋ ಎಂಬುದನ್ನು ಹೇಳಲಿಲ್ಲ. ಬಹುಶಃ ಮಾತು ಅವನ ಕಿವಿಯೊಳಗೇ ಹೊಕ್ಕಿರಲಿಕ್ಕಿಲ್ಲ. ಆದರೆ ಮಗಳ ಕಿವಿಗೆ ಬಿದ್ದಿತ್ತು. ಅವಳು ತನ್ನ ಒಪ್ಪಿಗೆಯನ್ನೂ ಸೂಚಿಸಿದಳು. ಮಗಳು ಅಳಿಯ ಇಬ್ಬರೂ ಒಂದೇ— ಇತರ ವಿಷಯಗಳಲ್ಲಿ ಅವಳು ಹೇಳಿದರೆ ಸಾಕು, ಕೆಲಸ ನಡೆಯುವುದು. ಸಾಕ್ಷಿಗಳ ಬಗ್ಗೆ ಗುಪ್ತವಾಗಿ ಹಣ ವೆಚ್ಚ ಮಾಡುವುದಕ್ಕೆ ಅಳಿಯದೇವರು ಬಾಯಿಬಿಟ್ಟು ಒಪ್ಪಿಗೆ ಕೊಡದಿದ್ದುದರಿಂದ ರಾಯಮಹಾಶಯನ ಉತ್ಸಾಹದ ಪ್ರಖರತೆ ಬಹಳ ಕಡಿಮೆಯಾಯಿತು.

"ಒಳ್ಳೆಯದು, ಆ ಎಲ್ಲ ವಿಚಾರ ನಾಳೆ ನಾಡದು ಸಾವಕಾಶ ಮಾಡುವ. ಈಗ ಹೋಗು. ಕೈಕಾಲು ಮೋರೆ ತೊಳೆದುಕೊಂಡು ಒಂದಿಷ್ಟು ಬಾಯೊಳಗೇನಾದರೂ ಹಾಕಿಕೋ. ಇಡೀ ದಿನ—"

ಮಾತು ಮುಗಿಯುವ ಮೊದಲೇ ಗೋಕುಲ ಎದ್ದು ನಿಃಶಬ್ದವಾಗಿ ಹೊರಟು ಹೋದ. ರಾಯಮಹಾಶಯ ಮಗಳ ಕಡೆ ನೋಡಿ ನುಡಿದ: "ಅವನಂತೂ ಮಾತನಾಡಲಿಲ್ಲ. ದುಡ್ಡಿಲ್ಲದೆ ವ್ಯಾಜ್ಯ ನಡೆಯುವುದೇ? ವಿರುದ್ಧ ಪಕ್ಷದ ಸಾಕ್ಷಿಗಳನ್ನು ಒಡೆದುಕೊಳ್ಳುವುದು ಬರಿಗೈಯಿಂದ ಸಾಧ್ಯವೆ? ಅಂಜಿದರೆ ಹೇಗೆ?"

ನಿಮಾಯಿ ಪಕ್ಕಾ ಮನುಷ್ಯ. ನೆರಳು ನೋಡಿ ಮನಸು ತಿಳಿಯುವವ. ಗೋಕುಲನ ಈ ಸ್ತಬ್ಧತೆಗೆ ದುಡ್ಡು ವೆಚ್ಚವಾಗುವದೆಂಬ ಭಯ ಕಾರಣ ಎಂದು ತಿಳಿದುಕೊಳ್ಳಲು ಆತನಿಗೆ ತಡವಾಗಲಿಲ್ಲ. ಆವರಿಷ್ಟಕ್ಕೇ ಅಭಿಮಾನ ಹಿಡಿದು ಮಗಳನ್ನು ಈ ವಿಪತ್ತಿನಲ್ಲಿ ಬಿಟ್ಟು ಹೋಗಲು ರಾಯನ ಮನಸು ಒಪ್ಪಲಿಲ್ಲ. ತನ್ನಂತಹ ಸ್ವಜನನ ಹೊರತು, ಲೆಕ್ಕಪತ್ರವಿಲ್ಲದೆಯೆ ವೆಚ್ಚ ಮಾಡುವ ಗುರುಭಾರವನ್ನು ಯಾರು ಹೊರಬಲ್ಲರು? ಇದರೊಳಗೆ ತನಗೆಷ್ಟೇ ನಷ್ಟವಾಗಲಿ— ನಿಮತಲಾದ ಮುಂಡಿಯ ಕೆಲಸ ಹೋದರೂ ಚಿಂತೆಯಿಲ್ಲ— ತಾನು ಹಿಂದಡಿ ಇಡುವುದಿಲ್ಲ ಇತ್ಯಾದಿ ಇತ್ಯಾದಿ ಅನೇಕ ವಚನಗಳಿಂದ ರಾತ್ರಿ ಬಹಳ ಹೊತ್ತಿನತನಕ ಮಗಳನ್ನು ಸಂತಯಿಸುತ್ತಲಿದ್ದ.

## ೧೦

ಸಾಮಾನ್ಯ ಕಾರಣದಿಂದಲೇ ಗೋಕುಲನ ಕಣ್ಣು ಕೆಂಪಾಗುವವು. ಈಗಂತೂ ಇಡೀ ರಾತ್ರಿ ನಿದ್ದೆ ಹತ್ತಲಿಲ್ಲ; ಬೆಳಗಾಗುತ್ತಲೇ ಅವನು ತಾಯಿಯ ಕೋಣೆಗೆ ಹೋದ; ಅವನ ಬಾಡಿದ ಮೋರೆಯನ್ನು ಕಂಡು ಭವಾನಿ ಗಾಬರಿಯಾದಳು. ಗೋಕುಲ ಕೋಣೆಯೊಳಗೆ ಕಾಲಿಟ್ಟವನೇ "ಮಲತಾಯಿ ಎಂದರೇನೆಂಬುದು ಈಗ ತಿಳಿಯಿತು" ಎಂದ.

ಇತ್ತೀಚೆಗೆ ಅವನು ಈ ಮಾತನ್ನು ಪುನಃ ಪುನಃ ಎನ್ನುತ್ತಿದ್ದ ಒಂದು; ಮೇಲಾಗಿ ಇತರ ನಾನಾಪ್ರಕಾರಗಳಿಂದ ಭವಾನಿಯ ಸ್ವಾಭಾವಿಕ ಮಾಧುರ್ಯ ದಿನದಿನಕ್ಕೆ ನಷ್ಟವಾಗುತ್ತಲಿತ್ತು. ಅಲ್ಲದೆ ಮನೆಯೊಳಗೆ ಮನೆಯವರು ಹೊರಗಿ

ನವರು ಬಹಳ ಜನ ಇದ್ದರು. ಆದುದರಿಂದ ಅವಳು ಆತ್ಮನಿಗ್ರಹ ಮಾಡಿಕೊಂಡು ಸಂಕ್ಷೇಪವಾಗಿ ಕೇಳಿದಳು: "ಏನಾಗಿದೆ ?"

"ಆಗುವುದೇನು ? ನೀವು ಮಾಡಬಲ್ಲಿರಾದರೂ ಏನು ? ವಿನೋದ ಖಟ್ಲೆ ಹೂಡುವುದರಿಂದ ಏನೇನೂ ಆಗುವುದಿಲ್ಲ ಕಂಟೆಯಾ ? ಈ ಕಡೆ ನಿಮಾಯಿರಾಯರಿದ್ದಾರೆ— ಅವರೇನು ಸಾಮಾನ್ಯರಲ್ಲ, ನೆನಪಿರಲಿ."

ಭವಾನಿ ಸಿಟ್ಟುಬಿಟ್ಟು ಸೋಜಿಗದಿಂದ ಪ್ರಶ್ನಿಸಿದಳು. "ವಿನೋದ ವ್ಯಾಜ್ಯ ಹೂಡುವನೆಂದು ನಿನಗೆ ಯಾರು ಹೇಳಿದರು ?"

"ಎಲ್ಲರೂ ಹೇಳುತ್ತಾರೆ. ಇದು ಯಾರಿಗೆ ಗೊತ್ತಿಲ್ಲವೆಂದು ತಿಳಿದಿದ್ದೀ?"

"ಎಲ್ಲಿ ! ನನಗಂತೂ ಗೊತ್ತಿಲ್ಲವಲ್ಲ !"

"ಒಳ್ಳೆಯದು, ಗೊತ್ತಿದೆಯೋ ಇಲ್ಲವೋ ಎಂಬುದನ್ನು ನಾವು ನೋಡಿಕೊಳ್ಳುತ್ತೇವೆ." ಎನ್ನುತ್ತ ಗೋಕುಲ ಸಿಟ್ಟಿನಿಂದ ಮರಳುತ್ತಲಿದ್ದ. ಆದರೆ ತಿರುಗಿ ನಿಲ್ಲುತ್ತಲೇ ಮಾವನಾಡಿದ ಮಾತು ತಟ್ಟನೆ ಅವನ ಬಾಯಿಂದ ಹೊರಟಿತು: "ನಿಮ್ಮಂಥ ಶತ್ರುಗಳನ್ನು ನಾವು ಮನೆಯೊಳಗೆ ಇಟ್ಟುಕೊಳ್ಳುವುದಿಲ್ಲ !"

ಈ ಮಾತು ಆಡಾಡುತ್ತಲೇ ಅವನ ರುದ್ರ ಮೂರ್ತಿ ವಿವರ್ಣವಾಯಿತು. ಆದರೆ ಬೇಡನ ಹೆದೆಯೇರಿಸಿದ ಬಿಲ್ಲಿನೆದುರಿಂದ ಭಯಾರ್ತವಾದ ಎರಳೆ ದಿಕ್ಕೆಟ್ಟು ಓಡುವಂತೆ, ಗೋಕುಲ ತಾಯಿಯ ಕಣ್ಣೆದುರಿನಿಂದ ಓಟಕೊಟ್ಟ. ತಾನು ಎಂಥ ಮಾತು ಆಡಿದನೆಂಬುದು ಅವನಿಗೆ ತಿಳಿದಿತ್ತು. ಅದಕ್ಕೇ ಅಂದಿಡೀ ದಿನ ಮನೆಯೊಳಗೆ ಅವನ ಸದ್ದು ಸುಳಿವು ಇರಲಿಲ್ಲ. ಕುಟುಂಬದವರ ಭೋಜನ ಸಮಯಕ್ಕೂ ಬರಲಿಲ್ಲ. ಭವಾನಿಯನ್ನು ಕೇಳಲಾಗಿ, ಅಗತ್ಯದ ವಸೂಲಿಗಾಗಿ ಹೊರಗೆ ಹೋಗಿದ್ದಾನೆಂದೂ ಬರುವುದು ಯಾವಾಗಲೋ ಹೇಳಿ ಹೋಗಿಲ್ಲವೆಂದೂ ತಿಳಿಯಿತು. ನಿಮಾಯಿರಾಯನೇ ಪೂರ್ಣ ಯಜಮಾನಿಕೆ ವಹಿಸಿ ಯಾವ ಕುಂದುಕೊರತೆಯೂ ಇಲ್ಲದೆ ಆದರೋಪಚಾರ

ಮಾಡಿದ. ಹೊರಗಿನಿಂದ ಆಮಂತ್ರಿತರಾಗಿ ಬಂದಿದ್ದವರೊಟ್ಟಿಗೆ ಕುಳಿತು ವಿನೋದ ನೀರವವಾಗಿ ಉಂಡೆದ್ದು ಹೋದ.

ಬಿರುಗಾಳಿಯ ಮುಂಚೆ ನಿರಾನಂದ ಪ್ರಕೃತಿ ಸ್ತಬ್ಧವಾಗಿರುವಂತೆ, ತುಂಬ ಜನರಿದ್ದೂ ಮನೆಯೆಲ್ಲ ಅಮಂಗಲ ಸುರಿಯುತ್ತಿತ್ತು. ಏನೂ ಕಾರಣ ವಿಲ್ಲದೆ ದಾಸದಾಸಿಯರು ಕುಂಠಿತರಾಗಿ ತ್ರಸ್ತರಾಗಿ ತಿರುಗಾಡುತ್ತಲಿದ್ದರು ಹೀಗೆ ಮತ್ತೆರಡು ದಿನ ಹೋದವು. ಶ್ರಾದ್ಧಕ್ಕಾಗಿ ಬಂದಿದ್ದವರು ಒಬ್ಬೊಬ್ಬರೇ ಹೊರಟು ಹೋದರು. ಅತ್ತೆವ್ವ ತನ್ನ ಮಕ್ಕಳುಮರಿ ಕರೆದುಕೊಂಡು ವರ್ಧ ಮಾನಕ್ಕೆ ಹೋದಳು. ವಿನೋದ ಬೆಳಗಿನಿಂದ ಸಂಜೆಯತನಕ ತನ್ನ ಹೊರ ಕೋಣೆಯಲ್ಲಿಯೇ ಕುಳಿತು ಕಾಲ ಕಳೆಯುತ್ತಿದ್ದ. ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಒಳಗೆ ಭವಾನಿ ಒಮ್ಮೆಲೆ ಮೂಕಿಯಾಗಿ ಬಿಟ್ಟಿದ್ದಳು. ಅಂದು ತಾಯಿಯೆದುರಿನಿಂದ ಓಡಿದ ಗೋಕುಲನ ಸದ್ದು ಒಳಗೆ ಹೊರಗೆ ಎಲ್ಲಿಯೂ ಇರಲಿಲ್ಲ. ಈ ರೀತಿ ಮೂರು ನಾಲ್ಕು ದಿನಗಳಾದವು. ಮನೋರಮೆ ಆಕೆಯ ಮಕ್ಕಳು ಹೊರತು ಮನೆಯೊಳಗೆ ಯಾರೂ ಇಲ್ಲ!

ನಿಮಾಯಿ ರಾಯ ತನ್ನ ಕಲಕತ್ತೆಯ ಸಂಬಂಧ ಕಡಿದುಕೊಳ್ಳಲು ಹೋಗಿದ್ದ. ಇಂದು ಬೆಳಿಗ್ಗೆ—ನಿಮತಲಾದ ಮಂಡಿಯನ್ನು ಬಹುಶಃ ಆಥಾಂಗ ಸಮುದ್ರದಲ್ಲಿ ಕೈ ಬಿಟ್ಟು-ಮಗಳು ಅಳಿಯರನ್ನು ದಂಡೆಗಾಣಿಸಲು ತಿರುಗಿಬಂದ. ಸಂಗಡ ಆತನ ಕನಿಷ್ಠ ಪುತ್ರನೂ ಬಂದ. ಅವನ ಬರವಿನ ಉದ್ದೇಶವ ಪರಿಷ್ಕಾರ ಆಗಾಗದಿದ್ದರೂ ಬರೀ ಅಕ್ಕ ಭಾವಂದಿರನ್ನು ನೋಡಿಕೊಂಡು ಹೋಗಲು ಬಂದಿರಲಿಲ್ಲವೆಂಬುದು ಸ್ಪಷ್ಟವಾಯಿತು. ಪ್ರಾಜ್ಞ ಶ್ವಶುರನ ಪ್ರೋತ್ಸಾಹನೆ ಇಲ್ಲದುದಕ್ಕೆ ಈ ಕೆಲ ದಿನ ನಿರ್ಜೀವನಾಗಿದ್ದ ಗೋಕುಲನ ಸ್ಥಿತಿ ಸುಧಾರಿಸಿದೆ. ಮನೋರಮೆಯ ವಿಷಯವನ್ನಂತೂ ಹೇಳುವುದೇ ಬೇಡ. ಅಂದು ಬೆಳಗಿನಿಂದಲೂ ಮನೆತುಂಬ ಮೆಮ್ಮೈಲೆಚ್ಚರಿಲ್ಲದೆ ಆಡ್ಡಾಡುತ್ತಿದ್ದಳು. ಊಟವಾದ ಬಳಿಕ ಮನೋರಮೆಯ ಕೋಣೆಯೊಳಗೆ ಸಭೆ ಸೇರಿತು. ಕೊಂಚ ವೇಳೆ ಚರ್ಚೆ

ಯಾಗಿ ಎಲ್ಲವೂ ತೀರ್ಮಾನವಾಯಿತು. ಅಂದು ಚಕ್ರವರ್ತಿಗೆ ವೇತನ ಕೊಡಬೇಕಾಗಿತ್ತು. ಅವನಿಗೆ ಅಪ್ಪಣೆ ಕೊಡುವ ಮೊದಲು ನಿಮಾಯಿ ಅವನ ಕಾಗದ ಪತ್ರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ತಿಳಿದುಕೊಳ್ಳಲು ತೊಡಗಿದ. ಪಾಪ, ಚಕ್ರವರ್ತಿಗೆ ದುಃಖದಿಂದ ಮುಂಗಾಣದಾಗಿತ್ತು. ಸರಿಯಾಗಿ ಉತ್ತರ ಕೊಡುವುದಕ್ಕೂ ಲೆಕ್ಕ ತಿಳಿಸಿ ಹೇಳುವುದಕ್ಕೂ ಆಗದೆ ಹೋಯಿತು. ಅರ್ಥಾತ್ ಕ್ಷಣ ಕ್ಷಣಕ್ಕೂ ಅವನು ಕಟಕಿ ಮಾತು ಆಡಿಸಿಕೊಳ್ಳಬೇಕಾಯಿತು, ತಂದೆ ಮಕ್ಕಳು ಸೇರಿ ಪ್ರಶ್ನಿಸವಾಲಿನಿಂದ ರಸಿಕನನ್ನು ಕಳ್ಳ ಮೋಸಗಾರ ಎಂದೇ ತೋರಿಸಿಕೊಟ್ಟರು.

"ನಾನಿದ್ದಿಲ್ಲ, ಎಂತಲೇ ಬಹಳ ದುಡ್ಡು ತಿಂದು ಹಾಕಿದೆ. ಇನ್ನು ಇದು ನಡೆಯದು. ಹೋಗು, ನಿನಗೆ ತಕ್ಕ ಫಲ ಸಿಕ್ಕುವುದು." ನಿಮಾಯಿ ಕೊನೆಗೆ ಹೇಳಿದ.

"ಬಾಬೂ, ನಾ ಈವೊತ್ತಿನ ಕೆಲಸಗಾರ ಅಲ್ಲ; ಧನಿಯರು ನನ್ನನ್ನು ಬಲ್ಲರು." ಕಣ್ಣೀರು ತಂದು ಚಕ್ರವರ್ತಿ ಹೇಳಿದ.

ಗೋಕುಲ ಮುಖ ತಗ್ಗಿಸಿಕೊಂಡ. ರಾಯನ ಕನಿಷ್ಠ ಪುತ್ರ ಘೋರೆ ಕಿವುಚಿ ಮಾತನಾಡಿದ: "ನಿಮ್ಮ ಧನಿಯರಂತೆ ಅಪ್ಪನೂ ಎತ್ತು ಎಂದು ತಿಳಿದೆಯಾ? ಇನ್ನು ಮಾಯೆ ಮಂತ್ರ ನಡೆಯದು, ನಡೆ ಹೋಗು."

ಘೋರ ಶ್ಯಾಲಕನ ಅತ್ಯಂತ ಅಭದ್ರ ತಿರಸ್ಕಾರದಿಂದ ಚಕ್ರವರ್ತಿಗೆ ವ್ಯಥೆಯಾಯಿತು. ಕಣ್ಣೊರಿಸಿಕೊಂಡು ನಸುವೇಳೆ ಸುಮ್ಮನಿದ್ದು ಗೋಕುಲ ನನ್ನು ಕುರಿತು ನುಡಿದ: "ನನ್ನ ನಾಲ್ಕು ತಿಂಗಳ ಸಂಬಳ—"

ಗೋಕುಲ ತಟ್ಟನೆ ಹೇಳಿಬಿಟ್ಟ: "ಹೌದು, ಅದು ಕೊಡುವುದಿದೆ ಚಕ್ರೋತ್ತಿ. ಅಲ್ಲದೆ ಮತ್ತೇನಾದರು—"

ನಿಮಾಯಿ ನಡುವೇ ತಡೆದ: "ನೀ ಸುಮ್ಮನಿರು ತಮ್ಮಾ" ಎಂದು ಗುಡುಗಿನ ಗಂಭೀರ ಸ್ವರದಲ್ಲಿ ಚಕ್ರರ್ತಿಗೆ ಹೇಳಿದ: "ಬಾಬು ಅವನಲ್ಲ,

ನಾನು. ನಾ ಮಾಡಿದ್ದೇ ಮಟ್ಟ. ಸಂಬಳ ನಿನಗೆ ಸಿಗಲಾರದು. ನಿನ್ನನ್ನು ಸೆರೆಮನೆಗೆ ಕಳಿಸಲಿಲ್ಲ, ಇದೇ ನಿಮ್ಮಪ್ಪನ ಪುಣ್ಯ ಎಂದು ತಿಳಿ."

ಚಕ್ರವರ್ತಿ ಹೆಚ್ಚು ಮಾತಾಡದೆ ಹೊರಟು ಹೋದ. ಇಷ್ಟು ಹೊತ್ತಿನ ತನಕ ಮಾತು ಹೊರಕ್ಕೆ ಹಾಕಲವಕಾಶವಿಲ್ಲದೆ ಮನೋರಮೆ ಉಬ್ಬಿದ್ದಳು. ಅವನು ಹೋಗುತ್ತಲೇ ಗಂಭೀರ ಮುಖದಿಂದ ಗಂಡನಿಗೆಂದಳು: "ಇನ್ನು ಮೇಲೆ ನೀವು ಅಪ್ಪನ ಮಾತಿನಲ್ಲಿ ಬಾಯಿ ಹಾಕಿದರೆ, ನಾನು ಉರುಲು ಹಾಕಿಕೊಂಡು ಸಾಯುವೆ, ಇಲ್ಲನೆ ಎಲ್ಲರನ್ನೂ ಕಟ್ಟಿಕೊಂಡು ಅಪ್ಪನ ಮನೆಗೆ ಹೋಗಿ ಬಿಡುವೆ."

ಗೋಕುಲ ಮುಖ ತಗ್ಗಿಸಿ ಸುಮ್ಮನಾದ. ತಂದೆ ಮತ್ತು ತಮ್ಮನ ಎದುರಿನಲ್ಲಿ ಗಂಡ ಅಕರ್ಮಣ್ಯನಾದನೆಂಬ ಸಂತೋಷ-ಗರ್ವಗಳಿಂದ ಮನೋರಮೆ ನುಡಿದಳು: "ಅಪ್ಪಾ, ನಮ್ಮ ನಂದಲಾಲನನ್ನು ಅಂಗಡಿಯ ಯಾವುದೊಂದು ಕೆಲಸಕ್ಕೆ ಏಕೆ ನಿಯಮಿಸಬಾರದು?"

"ಅದಕ್ಕೇ ಕರೆದುಕೊಂಡು ಬಂದಿದ್ದೇನಮ್ಮಾ. ನನಗಿಲ್ಲಿ ಹೆಚ್ಚು ದಿನ ನಿಲ್ಲಲಿಕ್ಕಾಗುವುದಿಲ್ಲ; ನನ್ನ ದಲಾಲಿ ಕೆಲಸ ನಿಂತು ಹೋಗುವುದು. ನನಗೆಲ್ಲಿ ಬರುವುದಕ್ಕೆ ಅವಕಾಶವಿತ್ತಮ್ಮಾ? ಬಾಬುಗಳೊಡನೆ ಜಗಳಾಡಿಯೇ ಬರಬೇಕಾಯಿತು. ಅವರು ಕಳವಳದಿಂದ, 'ರಾಯ ಮಹಾಶಯ, ನೀವು ತಿರುಗಿ ಬರುವ ತನಕ ನನ್ನ ಗಂಟಲೊಳಗೆ ಅನ್ನ ನೀರು ಇಳಿಯುವುದಿಲ್ಲ. ಹಗಲೂ ರಾತ್ರಿ ನಿಮ್ಮ ಹಾದಿಯನ್ನೇ ಕಾಯುತ್ತಿರುವೆ' ಎಂದರು. ಆದಕ್ಕೇ ನಮ್ಮ ನಂದಲಾಲನಿಗೆ ಎಲ್ಲ ತೋರಿಸಿ ಹೇಳಿ ಕಲಿಸಿ ಒಪ್ಪಿಸಿ ಹೋಗಬೇಕೆಂದು ಮಾಡಿದ್ದೇನೆ. ಇವ ಎಷ್ಟೆಂದರೂ ನನ್ನ ಮಗ ಅಲ್ಲವೆ?"

"ಹಾಗೇ ಮಾಡಪ್ಪ. ನಾ ಇಷ್ಟರ ಸಲುವಾಗಿಯೇ—"

ಮನೋರಮೆ ಹಠಾತ್ ತಲೆಯ ಮೇಲೆ ಸೆರಗೆಳೆದುಕೊಂಡು ಮಾತು ನಿಲ್ಲಿಸಿದಳು. ಬಾಗಿಲಲ್ಲಿ ಚಕ್ರವರ್ತಿ ಬಂದು ನಿಂತ. "ಬಾಬೂ, ಅವ್ವ ಬಂದಿದ್ದಾರೆ" ಎಂದ.

ಗೋಕುಲ ವ್ಯಸ್ತನಾಗಿ ಎದ್ದ. ಈಗೆಂಟು ದಿನ ಅವಳೊಡನೆ ದೃಷ್ಟಾ ದೃಷ್ಟಿಯಾಗಿರಲಿಲ್ಲ. ಬಾಗಿಲ ಮರೆಗೆ ನಿಂತು ಭವಾನಿ ಸಹಜ ಸ್ವರದಿಂದ ಕೂಗಿದಳು: " ಗೋಕುಲ ! "

" ಏನವ್ವಾ ? " ಗೌರವದಿಂದ ಗೋಕುಲ ಕೇಳಿದ.

ಭವಾನಿ ನಿಂತಲ್ಲಿಂದಲೇ ಸ್ಪಷ್ಟಸ್ವರದಿಂದ ಹೇಳಿದಳು: " ಇದೆಲ್ಲ ಹುಚ್ಚುಚ್ಚಾರ ಮಾಡಲಿಕ್ಕೆ ಯಾರು ಹೇಳಿದರು ನಿನಗೆ? ಚಕ್ರವರ್ತಿ ಬಹಳ ದಿನಗಳಿಂದ ಇದ್ದಾತ. ಸಾಯುವವರೆಗೂ ಅವನನ್ನು ನಾ ಬಿಡಿಸುವುದಿಲ್ಲ. ಪೆಟ್ಟಿಗೆಯ ಕೀಲಿ ಕೈ ಖಾತೆ ಪುಸ್ತಕ ಕೊಟ್ಟು ಅಂಗಡಿಗೆ ಕಳಿಸು ! " ಒಂದು ಕ್ಷಣ ಸುಮ್ಮನಿದ್ದು ಮತ್ತೆ ಹೇಳಿದಳು: " ಇನ್ನೊಂದು ಮಾತು. ಬೀಗ ಮಹಾಶಯರು ದಯವಿಟ್ಟು ಬಂದರು, ಒಳ್ಳೆಯದಾಯಿತು; ಪ್ರೀತಿಯಿಂದ ನಾಲ್ಕು ದಿನ ಇರಲಿ, ಮಾತಾಡಲಿ ಕಥೆಯಾಡಲಿ; ಆದರೆ ನಮ್ಮಂಗಡಿಯೊಳಗೆ ಕಳವಾಗುತ್ತದೆಯೋ ಹೇಗೆ ಎಂಬುವನ್ನು ನೋಡುವುದಗತ್ಯವಿಲ್ಲ. ನಮ್ಮಂಗಡಿಯ ಖಾತೆ ಕಾಗದ ಪತ್ರಗಳಲ್ಲಿ ಮಂದಿಯ ಕೈವಾಡಬೇಕಾಗಿಲ್ಲ ನನಗೆ. ಗೋಕುಲ, ಕೀಲಿ ಕೈ ಕೊಡು, ಈತ ಹೋಗಲಿ. "

ಯಾರ ಉತ್ತರವನ್ನೂ ಅಪೇಕ್ಷಿಸದೆ ಭವಾನಿ ಹೋಗಿ ಬಿಟ್ಟಳು. ಸಿಡಿಲೆರಗಿದರೂ ಆಗದಷ್ಟು ಕಕ್ಕಾವಿಕ್ಕಿಯಾಗಿದ್ದರು ಜನ. ತುಸಹೊತ್ತಿನ ಮೇಲೆ ನಿಮಾಯಿ ಒಣನಕ್ಕು ನುಡಿದ: " ಇದಕ್ಕೆನ್ನುತ್ತಾರೆ ಯಾರದೋ ದುಡ್ಡು, ಯಾರದೋ ಅಧಿಕಾರ! ನೋಡಿದೆಯಿಲ್ಲವೋ ತಮ್ಮಾ, ದರ್ಪದ ಅಜ್ಞಾ! "

ತಮ್ಮ ಮಾತ್ರ ಮಾತನಾಡಲಿಲ್ಲ: ಉತ್ತರವಿತ್ತ ಅವನ ಪುತ್ರರತ್ನ! : " ಇದೆಲ್ಲ ತಿಳಿದದ್ದೇ ಅಪ್ಪಾ. ನೀ ಇದ್ದರೆ ಯಾರಿಗೂ ಕಳವು ಸಾಧಿಸದು. ಸುಟ್ಟಿತು ಅಜ್ಞೆ! "

" ಹೌದು, ನಿಜ " ಎಂದು ಮಗನನ್ನು ಅನುಮೋದಿಸಿ, ಚಕ್ರವರ್ತಿ ಕಣ್ಣಿಗೆ ಬೀಳುತ್ತಲೇ ರಾಯ ಮಹಾಶಯ ಉರಿದೆದ್ದು ನುಡಿದ: " ಏಕೆ

ನಿಂತೆ, ಹೋಗು! ಹೋಗಿ ಕರೆದುಕೊಂಡು ಬಂದಿದ್ದಾನೆ! ನಾ ಎಂದು ಕೊಂಡಿದ್ದೆ— ಬ್ರಾಹ್ಮಣ ಇದ್ದಾನೆ, ಹೋಗಲಿ ಸತ್ತುಕೊಳ್ಳಲಿ, ಆಗುವುದಾಗಿದೆ, ಒಂದು ಹತ್ತು ರೂಪಾಯಿ ಕೊಟ್ಟರಾಯಿತು ಎಂದು. ಆದರೆ ಮತ್ತೂ ಅದೇ! ನಿನ್ನನ್ನು ಶ್ರೀಗೃಹಕ್ಕೆ ಕಳಿಸುವುದೇ ಯೋಗ್ಯ!"

ಆದರೆ ಮನೋರಮೆಗೆ, ಗಂಡನ ಮುಖಭಾವ ಕಂಡು ಮಾತನಾಡಲು ಧೈರ್ಯವಾಗಲಿಲ್ಲ. ಗೋಕುಲ ನಿಂತಿದ್ದ ಹಾಗೆಯೇ ಅಚೇತನನಾಗಿದ್ದ. ಚಕ್ರವರ್ತಿ ಇವರ ಯಾರ ಮಾತಿಗೂ ಉತ್ತರ ಕೊಡದೆ ವಿನಯದಿಂದ ಒಡೆಯನಿಗೆ "ಹಾಗಾದರೆ ನಾ ಕಾಗದ ಪತ್ರ ತೆಗೆದುಕೊಂಡು ಹೋಗುತ್ತೇನೆ. ಕೀಲಿಕೈ ಕೊಡಿರಿ," ಎಂದ.

ಗೋಕುಲ ಮಾತನಾಡದೆ ನಡದೊಳಗಿನ ಕೀಲಿಕೈ ಗೊಂಚಲು ತೆಗೆದು ಒಗೆದ. ಚಕ್ರವರ್ತಿ ಅದನ್ನು ಟೊಂಕದಲ್ಲಿ ಸಿಕ್ಕಿಸಿಕೊಂಡು, ಕಾಗದಪತ್ರ ಬಗಲೊಳಗೆ ಹಿಡಿದುಕೊಂಡು, ನಗುವನ್ನು ಹತ್ತಿಟ್ಟು, ನೆಟ್ಟ ತೂಗುತ್ತ ಹೊರಟು ಹೋದ. ಅವನ ಆ ಗಮನದ ಭಂಗಿಯ ಅರ್ಥ ಸುಸ್ಪಷ್ಟನಾಗಿತ್ತು. ಕಂಡು ಜಗತ್ತಿನೊಳಗಿನ ಕಾಡಿಗೆಯನ್ನೆಲ್ಲ ತಂದು ಬಳಿದಂತೆ ನಿಮಾಯಿಯ ಕರಿಮೋರೆ ಕಪ್ಪಿಟ್ಟಿತು.

ಆ ಆಲೋಚನಾಗೃಹದಲ್ಲಿ ಆ ಮೇಲೆ ಉಂಟಾದ ದೃಶ್ಯ ನಿಜವಾಗಿಯೂ ಅನಿರ್ವಚನೀಯ. ತಂದೆಗೆ ಮತ್ತು ತಮ್ಮನಿಗೆ ಆದ ಅಪರಿಮಿತ ಅಪಮಾನದಿಂದ ಮನೋರಮೆ ಜ್ಞಾನ ಶೂನ್ಯಳೇ ಆದಳು. ಅವಳು ಗಂಡನನ್ನು ಬೇಕಾದಂತೆ ತಿರಸ್ಕರಿಸಿದಳು, ರೌದ್ರಾವತಾರ ತಾಳಿದಳು, ಬೇಡಿಕೊಂಡಳು, ಕೊನೆಗೆ ಎದೆಕರಗುವಂತೆ ಅತ್ತಳು. ಏನಾದರೂ ಅವನ ಬಾಯಿಂದ ಮಾವನಿಗೆ ಅನುಕೂಲವಾದ ಒಂದು ಮಾತೂ ಹೊರಡಲಿಲ್ಲ. ಮನೋರಮೆ ಜೋಲು ಮೋರೆಯಿಂದ ಹೆಣವಾಗಿ ಬಿದ್ದಳು. ಆಗ ಗೋಕುಲ ಲಜ್ಜೆ ಕ್ಷೋಭಗಳಿಂದ

ಗದ್ಗದ ಸ್ವರದಲ್ಲಿ ನುಡಿದ: "ತಾಯಿ ಹೀಗೆ ಅಪ್ಪಣೆ ಕೊಟ್ಟು ಹಗೆತನ ಸಾಧಿಸುವಳೆಂದು ನನಗೇನು ಗೊತ್ತು ?"

ನಿವಾಯಿ ಸಿಟ್ಟುಸಿರಿಟ್ಟು ಮಾತನಾಡಿದ: "ಸಾಕು, ಉಳಿದುಕೊಂಡೆ. ಒಂದು ದೊಡ್ಡ ಜೋಂಜಾಟದಿಂದ ಪಾರಾದೆ. ಅಲ್ಲಿ ನಮ್ಮ ದೇವರಂಥ ಯಜಮಾನ ಗೋಳಾಡುತ್ತಿದ್ದಾನೆ. ನನಗೇನು ಎಲ್ಲಿಯಾದರೂ ಸ್ಥಳ ಉಂಟು. ಅಲ್ಲದೆ, ನನ್ನ ಮನೆಯುದು ನಾ ಉಂಡು ಅಡವಿಯು ಇಲಿ ಹೊಡೆಯುವುದು ನನಗೇನಗತ್ಯ ? ಆದರೆ ತಂಗೀ, ಮಕ್ಕಳುಮರಿ ಕಟ್ಟಿಕೊಂಡು ನೀನು ಬೀದಿ ಪಾಲಾದರೆ—ಕಣ್ಣಿಗೇ ಕಾಣಿಸುತ್ತದೆ: ಹಾಗೆ ಆಗಿಯೇ ಆಗುವುದು—ನನಗೆ ದೋಷ ಕೊಡಬೇಡ, ಅಪ್ಪ ಕಣ್ಣೆತ್ತಿ ನೋಡಲೊಲ್ಲ ಎಂದು."

ಮಾವ ಅಳಿಯನ ಕಡೆಗೆ ತೀಕ್ಷ್ಣ ವಕ್ರದೃಷ್ಟಿ ಬೀರಿದ. ಆದರೆ ಆ ದೃಷ್ಟಿ ಮಗನ ಹೊರತು ಯಾರ ಲಕ್ಷ್ಯಕ್ಕೂ ಬರಲಿಲ್ಲ. ನಿವಾಯಿ ಮತ್ತಷ್ಟು ತೀವ್ರ ಸ್ವರದಿಂದ ಮಾತನಾಡತೊಡಗಿದ: "ನಾನೇನು ಇನ್ನೂ ಅಷ್ಟು ವಕ್ರಿಸಿಲ್ಲ; ವಕ್ರಿಸಿದರೆ ಮಾತ್ರ ನಿವಾಯಿ ಯಾರವನೂ ಅಲ್ಲ. ತ್ರಿಮೂರ್ತಿಗಳಿಗೂ ಮಣಿಯುವವನಲ್ಲ. ನೀವಿಬ್ಬರೂ ಇನ್ನೂ ಚೆನ್ನಾಗಿ ಏಕಾಂತದಲ್ಲಿ ವಿಚಾರಮಾಡಿರಿ. ತಮ್ಮ ನಂದಲಾಲ, ಎರಡೂವರೆ ಆಗಿ ಹೋಯಿತು. ಮೂರೂವರೆಯ ಗಾಡಿಗೆ ನಾ ಹೊರಡುವೆ. ಸಾಮಾನು ಕಟ್ಟಿಡು. ನಿಮ್ಮಪ್ಪನ ಮಾತು, ಪೃಥ್ವಿ ತಲೆ ಕೆಳಗಾದರೂ ತಿರುಗಲಾರದು!" ಎಂದು ನಿವಾಯಿ ದರ್ಪದಿಂದ ಮಗನ ಕೈ ಹಿಡಿದುಕೊಂಡು, ಮಗಳು-ಅಳಿಯರಿಗೆ ವಿಚಾರಕ್ಕೆ ಒಂದೇ ಗಂಟೆಯ ಸಮಯವಿತ್ತು ಹೊರಟು ಹೋದ.

ಆದರೆ ಕೆಲಸ ಏನೂ ಆಗಲಿಲ್ಲ. ಒಂದು ಗಂಟೆ ಬಲು ಕಿರಿದು! ಮಾವ ಮೂರು ದಿನ ನಿಂತು ಅವಿಶ್ರಾಂತವಾಗಿ ಸಿಟ್ಟು ಸೆಡವು ಮಾಡಿ, ಕಟೂಕ್ತಿ ಆಡಿ ನೋಡಿದ—ಗೋಕುಲನ ಮುಖದಿಂದ ಎರಡನೆಯ ಮಾತೇ ಹೊರಡಲಿಲ್ಲ. ಮಾವನಿಗಾದ ಅಪಮಾನಕ್ಕಾಗಿ ಗೋಕುಲನಿಗೆ ಮಿತಿಮೀರಿದ ನಾಚಿಕೆ,

ಅತ್ಯಂತ ಕ್ಷೋಭ ಉಂಟಾಗಿತ್ತು. ಆದರೂ ತಾಯಿಯ ಮಾತು ಮೀರಿ ಏನು ಮಾಡುವುದೂ ತಿಳಿಯದೆ ಎಲ್ಲವನ್ನೂ ಅವನು ನೀರವವಾಗಿ ನುಂಗಿಕೊಳ್ಳ ಬೇಕಾಯಿತು.

## ೧೧

ತನ್ನ ಎಲ್ಲ ಆಶೆ ಆಕಾಂಕ್ಷೆ ಮಣ್ಣುಗೂಡಿದವು, ವ್ಯರ್ಥ ಕಂಠಶೋಷ ವಾಯಿತು ಎಂದು ತಿಳಿದು ನಿಮಾಯಿ ನರಸಿಂಹಾವತಾರ ತಾಳಿದ. ತನ್ನನ್ನು ಕೆಲಸ ಬಿಡಿಸಿ ಕರೆಸಿದ್ದರಿಂದ ವಿಪರೀತ ನಷ್ಟವಾಯಿತು; ಅದನ್ನು ನೀವು ತುಂಬಿಕೊಡಬೇಕು ಎಂದು ಸ್ಪಷ್ಟನಾಗಿ ಹೇಳುವವರೆಗೂ ಬಂತು. ಇಷ್ಟರೊಳಗೆ ಅವನು ಬನರ್ಜಿ ಮಹಾಶಯರನ್ನು ಬಗಲಿಗೆ ಹಾಕಿಕೊಂಡಿದ್ದ. ಅವರು ಬಂದು ನೀ ಎಲ್ಲಿಯೋ ಹುಚ್ಚ ಇದ್ದೀ, ಕುರುಡ ಇದ್ದೀ ಎಂದು ಗೋಕುಲನನ್ನು ತಿರಸ್ಕರಿಸಿದರು. ಸೂಚ್ಯನಾಗಿ ಬೆದರಿಕೆಯನ್ನು ಹಾಕಿದರು: "ನೀನು ನಿಮಾಯಿರಾಯರಿಗೆ ಅಪಮಾನ ಮಾಡಿವೆಯಾದರೆ, ಅವರು ನಿನ್ನೊದನನ್ನು ಕೂಡಿಕೊಳ್ಳುವರು!"

ಗೋಕುಲ ನುಡಿದ ಕಾತರನಾಗಿ: "ಏನು ಮಾಡಲಿ ಮಾಸ್ತರರೆ? ಅವರನ್ನು ಮನೆಯೊಳಗಿಟ್ಟುಕೊಳ್ಳಲು ಅವ್ವನಿಗೆ ಮನಸ್ಸಿಲ್ಲ. ಅಂಗಡಿಗೂ ಬರಗೊಡಬಾರದೆಂದು ಚಕ್ರೊತ್ತಿಗೆ ಅಪ್ಪಣೆ ಮಾಡಿದ್ದಾಳೆ."

"ಈ ವ್ಯವಸಾಯ, ಈ ಧನಸಂಪತ್ತು ನಿನ್ನದೋ ಏನು ನಿಮ್ಮವ್ವ ನದೋ ಗೋಕುಲ? ಅಲ್ಲವೆ ನಿನ್ನ ಮಲತಾಯಿ ಈಗ ನಿನ್ನ ಶತ್ರು, ಗೊತ್ತಿದೆ ಯಷ್ಟೆ?"

ಇದಕ್ಕೆ ಗೋಕುಲ ಒಪ್ಪಿಗೆಯ ಗೋಣು ಹಾಕಿದ. ಬನರ್ಜಿ ಮಹಾ ಶಯರು ಸಮಾಧಾನಗೊಂಡು ನುಡಿದರು: "ಎಂದ ಮೇಲೆ, ಇನ್ನು ಈ ಹುಚ್ಚುತನ ಬಿಡು. ರಾಯ ಮಹಾಶಯರಿಗೆ ದತ್ತು ಹುಗ್ಗಾಣೆ, ಆಡಳಿತ

ವ್ಯವಸಾಯ ಎಲ್ಲಾ ಒಪ್ಪಿಸಿಬಿಟ್ಟು ರಾಮರಾಮ ಎಂತ ಕೂತುಕೊಂಡು ಮಜಾ ನೋಡು! ನನ್ನ ಮಾತು ಬಿಡು, ಇಂಥ ಪಕ್ಕಾ ಮನುಷ್ಯರು ಸುತ್ತ ಮುತ್ತ ಎಲ್ಲಿಯಾದರೂ ಸಿಕ್ಕಾರೆಯೇ? ವಿಚಾರಮಾಡು."

"ಅದೆಲ್ಲ ಬಲ್ಲೆ ಮಾಸ್ತರ್. ಆದರೆ ತಾಯಿಯನ್ನು ಕೇಳದೆ ಏನೂ ಮಾಡ ಬೇಡ ಎಂದು ಅಪ್ಪ ಹೇಳಿ ಹೋಗಿದ್ದಾರೆ."

ಬನರ್ಜಿಯವರು ವ್ಯಂಗ್ಯವಾಗಿ ನಕ್ಕು: "ಬೇಡವೆಂದಿದ್ದಾರೆ! ತಾಯಿ ನಿನಗೆ ಶತ್ರುವಾಗುವಳೆಂದು ನಿಮ್ಮಪ್ಪನಿಗೇನು ತಿಳಿದಿತ್ತೆ? ಬೇಡ ಎಂದರೇ ಸಾಯಿತು? ಅದಕ್ಕಾಗಿ ಸಂಪತ್ತಿಗೆ ನೀರು ಬಿಡುವೆಯಾ? ಹೇಳು," ಎಂದರು.

ಗೋಕುಲ ನಿರುತ್ತರನಾದ. ರಾಯಮಹಾಯ ನೇಪಥ್ಯದಲ್ಲಿ ನಿಂತು ಎಲ್ಲವನ್ನೂ ಕೇಳುತ್ತಲಿದ್ದ. ಈಗ ಎದುರಿಗೆ ಬಂದ. ಮಹಾರಥಿಗಳಿಬ್ಬರ ವಾಗ್ಬಾಣದಿಂದ ಗೋಕುಲ ನಿರ್ವಿಣ್ಣನಾದ. ಅವನು ಅಧೋಮುಖನಾಗಿ ಸುಮ್ಮನೆ ಕುಳಿತುದನ್ನು ಕಂಡು ಇಬ್ಬರೂ ಪ್ರಸನ್ನರಾದರು; ಅವನ ಸುಬುದ್ಧಿ ಗಾಗಿ ಪುನಃ ಪುನಃ ಕೊಂಡಾಡಿದರು.

ಬನರ್ಜಿ ಮಹಾಶಯರು ಮನೆಗೆ ಹೊರಡಲನುವಾಗಲು, ಕೃತಾರ್ಥ ಭಾವದಿಂದ ರಾಯಮಹಾಶಯ ಪಾದ ಮುಟ್ಟಿ ನಮಸ್ಕಾರ ಮಾಡಿದ. ಅವರು ಗೋಕುಲನ ಬೆನ್ನು ಚಪ್ಪರಿಸಿ, "ಗೋಕುಲ, ನಿನ್ನನ್ನು ಆಶೀರ್ವದಿಸುವೆ— ನೀ ಹೇಗೆ ನಮಗೆ ಸರ್ವಸ್ವವನ್ನೂ ಒಪ್ಪಿಸಿರುವೆಯೋ, ಹಾಗೆಯೆ ನಾವು ನಿನ್ನ ಕೂದಲೂ ಕೊಂಕಗೊಡುವುದಿಲ್ಲ. ಏನೆಂದಿರಿ ರಾಯಮಹಾಶಯರೆ?" ಎಂದರು.

ನಿಮಾಯಿ ಆನಂದ ವಿನಯಗಳಿಂದ ಗದ್ಗದ ಸ್ವರದಲ್ಲಿ ನುಡಿದ: "ತಮ್ಮ ಆಶೀರ್ವಾದದಿಂದ ಅದು ಕೈಗೂಡುವುದು. ಆದರೆ, ಶತ್ರುಗಳನ್ನು ಒಂದಿನವೂ ಈ ಮನೆಯಲ್ಲಿ ಇರಗೊಡುವುದಿಲ್ಲ ಬನರ್ಜಿಯವರೆ, ಹೇಳಿರು ತ್ತೇನೆ. ಮತ್ತವರು ಅಳಿಯದೇವರ ತಾಯಿಯಿರಲಿ, ಬೇಕಾದರೆ ತಮ್ಮ

ನಿರಲಿ. ಆ ಮಗ ಚಕ್ರೊತ್ತಿಯನ್ನು ತೆಗೆದುಹಾಕಿಯೇ ನೀರು ಕುಡಿಯುವೆ. ಯಾರಿದ್ದೀರೋ ಅಲ್ಲಿ? ಆ ಬ್ರಾಹ್ಮಣರನ್ನು ಕರೆದುಕೊಂಡು ಬರ್ರಿ ಅಂಗಡಿಯಿಂದ." ಎಂದು ರಾಯಮಹಾಶಯ ಹದಿನಾರಾಣೆ ಅಪೇಕೆ ಹದಿನೇಳಾಣೆ ಗೆದ್ದವನ ಹಾಗೆ ಹೂಂಕರಿಸಿದ.

ಗೋಕುಲ ಸಂಕೋಚದಿಂದ ಇಷ್ಟಾದ. "ಬೇಡ ಬೇಡ. ಅವನನ್ನು ಈಗ ಕರೆಯುವುದಗತ್ಯವಿಲ್ಲ" ಎಂದ ಮೆಲುದನಿಯಿಂದ.

ಎರಡು ಕೈಗಳನ್ನೂ ಎರಡು ದಿಕ್ಕಿಗೆ ಚಾಚಿ ರಾಯಮಹಾಶಯ ಹೇಳಿದ: "ಇಲ್ಲ ಇಲ್ಲ, ಗೋಕುಲ. ನಾವು ಅವನನ್ನು ಎಂದೆಂದೂ ಇಟ್ಟುಕೊಳ್ಳುವುದಿಲ್ಲ. ಮೋರೆಭಿಡೆ ಕೆಲಸದ್ದಲ್ಲ. ಅವನ ಕಣ್ಣು ನೆತ್ತಿಗೇರಿವೆ. ಅವನು ನಮಗೆ ಬೇಕಾಗಿಲ್ಲ."

ಗೋಕುಲ ಮೊದಲಿನಂತೆಯೇ ನಯನಾಗಿ ಉತ್ತರವಿತ್ತ: "ಆದರೆ ಅವ್ವನಿಗೆ ಬೇಕಾದವ. ಆಕೆ ನಿಯಮಿಸಿದವರನ್ನು ತೆಗೆಯಲು ಯಾರಿಗೂ ಅಧಿಕಾರವಿಲ್ಲ. ತಂದೆ ಆ ಅಧಿಕಾರ ನನಗೆ ಕೊಟ್ಟಿಲ್ಲ."

ಅವನ ಈ ಅಕಲ್ಪಿತ ಉತ್ತರದಿಂದ, ಶಾಂತ ಆದರೂ ದೃಢವಾದ ಕಂಠಸ್ವರದಿಂದ ಇಬ್ಬರೂ ಅಚ್ಚರಿಗೊಂಡು ತಬ್ಬಿಬ್ಬಾದರು. ಸ್ವಲ್ಪ ಹೊತ್ತು ಸುಮ್ಮನಿದ್ದು ಬನರ್ಜಿ ಮಹಾಶಯರು ಕೇಳಿದರು: "ಹಾಗಾದರೆ ಅವ ಇದ್ದೇ ಇರುವವ?"

"ಹೌದು. ಚಕ್ರೊತ್ತಿಯ ಮೇಲೆ ನಮ್ಮ ಕೈಯೇನೂ ನಡೆಯದು."

"ಹಾಗಾದರೆ ರಾಯ ಮಹಾಶಯರ ಗತಿಯೇನು?" ಎಂದು ಬನರ್ಜಿ ಕೇಳಿದರು ಭಯದಿಂದ.

"ಅವರು ಊರಿಗೆ ಹೋಗಲಿ. ಅವರಿರುವುದು ಅವ್ವನಿಗೆ ಬೇಕಿಲ್ಲ. ಕೆಲಸ ಬಿಟ್ಟು ಬಂದದ್ದಕ್ಕೆ ಏನು ನಷ್ಟವಾಗಿದೆಯೋ ಅವ್ವನನ್ನು ಕೇಳಿ ಕಳಿಸಿ ಕೊಡುತ್ತೇನೆ." ಎಂದು ಗೋಕುಲ ಉತ್ತರಕ್ಕಾಗಿ ಕಾಯದೆ ಹೊರಟುಹೋದ.

ಎಲ್ಲರೂ ಬಗೆದಿದ್ದರು— ಇಷ್ಟೊಂದು ಅಪಮಾನವಾದ ಮೇಲೆ ರಾಯ ಮಹಾಶಯ ಇಲ್ಲಿ ನಿಂತು ನೀರು ಕುಡಿಯಲಿಕ್ಕಿಲ್ಲವೆಂದು. ಆದರೆ ಎಂಟು ಹತ್ತು ದಿನ ಕಳೆದರೂ ಆ ಲಕ್ಷಣವೇನು ತೋರಲಿಲ್ಲ. ಬಹುಶಃ ಮಗಳು ಅಳಿಯರ ಮೇಲಿನ ನಿಸ್ಸೀಮ ಪ್ರೀತಿಯಿಂದಲೇ ಈ ಕ್ಷುದ್ರ ವಿಷಯವನ್ನು ಮನಸಿನೊಳಗೆ ಹಿಡಿಯದೆ, ಹಗಲಿರುಳು ಅವರ ಹಿತಕ್ಕಾಗಿ ಪ್ರಯತ್ನಿಸುತ್ತಲಿದ್ದ. ರಾಯನ ಈ ಹಿತಾಕಾಂಕ್ಷೆಯ ಪ್ರತಾಪದಿಂದ ಗೋಕುಲ ಅತ್ಯಂತ ಪೀಡಿತನಾದ, ವ್ಯಾಕುಲನಾದ. ಭವಾನಿಯೂ ಕ್ಷಣಕ್ಷಣಕ್ಕೆ ಅಸ್ಥಿರಳಾಗತೊಡಗಿದಳು. ಸೊಸೆ ಮತ್ತು ಆಕೆಯ ತಂದೆ ಎಡೆಬಿಡದೆ ಬಿಡುತ್ತಿದ್ದ ವಾಗ್ಬಾಣಗಳು, ಕೂತಾಗ ನಿಂತಾಗ ಉಂಬಾಗ ತಿಂಬಾಗ ಯಾವಾಗಲೂ ಅವಳ ಎದೆಯನ್ನು ಇಬ್ಬಾಗಿಸುತ್ತಿದ್ದವು.

"ಎಷ್ಟೆಂತ ಸಹಿಸುವುದು ? ನಾ ಮನೆಯೊಳಗಿರುವುದು ಗೋಕುಲನಿಗೆ ಬೇಡವಾಗಿದಿಯೆ ?" ಒಂದಿನ ಭವಾನಿ ಸೊಸೆಯನ್ನು ಕೇಳಿದಳು.

ಸೊಸೆ ಬೇಕೆಂತಲೇ ಉತ್ತರ ಕೊಡಲಿಲ್ಲ. ಮೋರೆ ಕೆಳಗೆ ಹಾಕಿದಳು. ಭವಾನಿ ನಸುವೇಳೆ ಸುಮ್ಮನಿದ್ದು, "ಒಳ್ಳೆಯದು, ಹಾಗೆ ಅವನಿಚ್ಛೆಯಿದ್ದರೆ ಅವನೇಕೆ ಸ್ಪಷ್ಟ ಹೇಳಬಾರದು ? ಹೀಗೆ ನಿಮ್ಮಪ್ಪನಿಂದ, ನಿಮ್ಮ ತಮ್ಮನಿಂದ ಹಗಲೂ ರಾತ್ರಿ ಅಪಮಾನ ಮಾಡಿಸುವುದೇಕೆ ?"

ಗೋಕುಲನಿಗೆ ಇದೆಳ್ಳಷ್ಟೂ ಗೊತ್ತಿಲ್ಲ, ಅವನಿಗೆ ತಿಳಿಯದಂತೆಯೇ ಈ ಕುಹಕರು ವಿಷದಂತದಿಂದ ತನ್ನನ್ನು ಕಚ್ಚುತ್ತಿರುವರೆಂಬುದು ಭವಾನಿಯ ಕಲ್ಪನೆಯಲ್ಲಿಯೂ ಬರಲಿಲ್ಲ. ಆದರೆ ಸೊಸೆ ಮಾತ್ರ ಮುಂಚಿನ ಸೊಸೆಯಾಗಿರಲಿಲ್ಲ. ಆವಳು ತತ್‌ಕ್ಷಣ ಪ್ರತ್ಯುತ್ತರವಿತ್ತಳು : "ಯಾರಿಗೆ ಯಾರು ಅಪಮಾನ ಮಾಡಿದರೆಂಬುದನ್ನು ದೇಶವೇ ಬಲ್ಲದು. ನನ್ನ ವಸ್ತು ನಾನು ಕಳ್ಳರಿಂದ ಉಳಿಸಿಕೊಳ್ಳುವುದಕ್ಕಾಗಿ ಅಪ್ಪ ತಮ್ಮಂದಿರನ್ನು ಇಟ್ಟುಕೊಂಡರೆ, ನಿಮ್ಮ ಹೊಟ್ಟೆಯೊಳಗೇಕೆ ಬೆಂಕಿಯಮ್ಮಾ ? ಒಬ್ಬರ ಸಲುವಾಗಿ ಇನ್ನೊಬ್ಬರು ಸಾಯಬೇಕೆ ?"

ಭವಾನಿ ತನ್ನನ್ನು ತಾನು ಸಂಯಮಿಸಿಕೊಂಡು ಗಂಭೀರವಾಗಿ, " ನಾ ಯಾರನ್ನು ಕೊಲ್ಲುವೆನಮ್ಮಾ?" ಎಂದಳು.

" ಯಾರನ್ನು ಕೊಲ್ಲುತ್ತಿದ್ದೀರೋ ಅವರೇ ಸಹಿಸುವರು. ಅದಕ್ಕೆ ಅವರೇನು ಮಾಡಬೇಕ , ನಾನಾದರೂ ಏನು ಮಾಡಬೇಕು ? ಇಟ್ಟಿಗೆಯಿಂದ ಹೊಡೆದವರು ಕಲ್ಲಿನೇಟು ತಿನ್ನಬೇಕಾಗುವದು; ಅದಕ್ಕೆ ಸಿಟ್ಟುಮಾಡಿಕೊಂಡರೆ ಆಗುವುದೇನು ? " ಎಂದು ಸೊರಿ ನಡೆದು ಬಿಟ್ಟಳು.

ಸ್ವಲ್ಪ ಸಮಯ ಸ್ತಂಭಿತಳಾಗಿ ನಿಂತು, ಬಳಿಕ ಭವಾನಿ ತನ್ನ ಕೋಣೆಗೆ ಹೋಗಿ ಬಿದ್ದುಕೊಂಡಳು. ಗಂಡ ಇದ್ದಾಗಿನ ಗೋಕುಲ, ಅವನ ಹೆಂಡತಿ ನೆನಪಿಗೆ ಬಂದು ಅವಳ ಕಣ್ಣೊಳಗೆ ನೀರು ಬಂದಿತು. ತನ್ನ ಕಾಲಿಗೆ ಮಾತ್ರವಲ್ಲ ಹುಡುಗನ ಕಾಲಿಗೂ ತಾನು ಕುಠಾರವಿಕ್ಕಿದಳೆಂಬ ಪಶ್ಚಾತ್ತಾಪ ಏನು ಮಾಡಿದರೂ ಅವಳ ಮನಸಿನಿಂದ ದೂರವಾಗಲಿಲ್ಲ. ಸಮಸ್ತ ಐಶ್ವರ್ಯ ವನ್ನು ಗೋಕುಲನಿಗೇ ಬರೆದುಕೊಡದಿದ್ದರೆ ಈ ದುರವಸ್ಥೆ ಉಂಟಾಗುತ್ತಿರಲಿಲ್ಲ. ವಿನೋದ ಎಷ್ಟೇ ಏಕೆ ಕೆಟ್ಟವನಿರಲೊಲ್ಲ, ತಾಯಿಯನ್ನು ಹೀಗೆ ಅಪಮಾನ ಕ್ಕೀಡು ಮಾಡುತ್ತಿರಲಿಲ್ಲ.

ವಿನೋದ ಒಳಗಿಂದೊಳಗೆ ಉಪಾರ್ಜನೆಗಾಗಿ ಏನು ಪ್ರಯತ್ನ ನಡೆಸಿದ್ದ ನೆಂಬುದನ್ನು ಯಾರೂ ಅರಿಯರು. ಅವನು ಕೋರ್ಟಿನಲ್ಲಿ ಒಂದು ಕೆಲಸ ದೊರಕಿಸಿ, ಊರಿನ ಕಡೆಯುಕ್ಕಡದಲ್ಲಿ ಸಣ್ಣ ಮನೆಯನ್ನು ಬಾಡಿಗೆಗೆ ಹಿಡಿದು, ಸಂಜೆಗೆ ಬಂದು ತಾಯಿಗೆ ಹೇಳಿದ: " ನಾ ನಾಳೆಯೆ ಬೇರೆ ಮನೆಗೆ ಹೋಗುತ್ತೇನೆ. "

ಭವಾನಿ ಆತುರದಿಂದೆದ್ದು ಕುಳಿತು, " ವಿನೋದ, ನನ್ನನ್ನೂ ಕರೆದು ಕೊಂಡು ಹೋಗಪ್ಪ. ಈ ಅಪಮಾನ ಸೈರಿಸಲಾರೆ. ನೀ ಇಟ್ಟ ಹಾಗೆ ಇರುವೆ, ಈ ಮನೆಯಿಂದ ನನ್ನನ್ನು ಮುಕ್ತಮಾಡು. " ಎಂದು ಅಳತೊಡಗಿದಳು.

ಬಳಿಕ ಒಂದೊಂದಾಗಿ ಎಲ್ಲ ಕತೆ ಕೇಳಿಕೊಂಡು ವಿನೋದ ಮನೆಯಿಂದ ಹೊರಬಿದ್ದ. ದಾರಿಯಲ್ಲಿ ಗೋಕುಲ ಬೆಟ್ಟಿಯಾದ. ಇಂತಹ ಸಂದರ್ಭದಲ್ಲಿ ಯಾವಾಗಲೂ ವಿನೋದ ಹೋಳಾಗಿ ದೂರ ಹಾಯುತ್ತಿದ್ದ. ಇಂದು ನಿಂತು ಅಣ್ಣನಿಗೆ ಹೇಳಿದ: "ನಾಳೆ ಅವ್ವನನ್ನು ಕರೆದುಕೊಂಡು ಹೊಸಮನೆಗೆ ಹೋಗುವೆ."

"ಹೊಸಮನೆಗೆ ? ನನ್ನನ್ನು ಕೇಳದೆಯೆ ಬೇರೆ ಮನೆ ಮಾಡಿದೆಯೇನು?"

"ಹಾಂ"

ಮಾತು ಗೋಕುಲನನ್ನು ಎಷ್ಟು ಮರ್ಮಾಂತಿಕವಾಗಿ ಗಾಸಿಗೊಳಿಸಿತೆಂಬುದು ಸಂಜೆಯ ಮಬ್ಬಿನಲ್ಲಿ ವಿನೋದನಿಗೆ ಕಾಣಲಿಲ್ಲ. ತಮ್ಮ ಎಂ. ಎ. ಆಗುವನೆಂಬ ಕನಸನ್ನು ಗೋಕುಲ ಚಿಕ್ಕಂದಿನಿಂದಲೂ ಕಾಣುತ್ತಲಿದ್ದ. ಸ್ವಲ್ಪ ಸಂಧಿ ಸಿಕ್ಕುತ್ತಲೆ ಎಲ್ಲರ ಮುಂದೆ ತಮ್ಮ ಆನರ್ ಗ್ರ್ಯಾಜುಯೇಟಾದ ವಿಷಯವನ್ನೆತ್ತುತ್ತಿದ್ದ. ಮಾತಾಡುತ್ತಾಡುತ್ತ ವಿನೋದನ ಹೊನ್ನ ಪದಕವನ್ನು ಹೊರತೆಗೆಯುತ್ತಿದ್ದ. ಮಕಮಲ್ಲಿನ ಪೆಟ್ಟಿಗೆ ಸಹಿತವಾಗಿ ಆ ಪದಕ ತನ್ನ ಜೇಬಿನಲ್ಲಿ ಹೇಗೆ ಬಂದಿತೆಂಬುದು ಅವನಿಗೆ ತಿಳಿಯದು. ಅದನ್ನು ತನ್ನ ಗಡಿಯಾಳದ ಸರಪಣಿಗೆ ಜೋಡಿಸಿಕೊಳ್ಳಬೇಕೆಂದು ಅವನ ಪ್ರಬಲ ಇಚ್ಛೆ. ಹೀಗೆ ಇಲ್ಲದ್ದೊಂದು ಹುಚ್ಚುಚ್ಚಾರ ಮಾಡಿದರೆ ಅದನ್ನು ಕಸಿದು ಬಾವಿಯಲ್ಲಿ ಚೆಲ್ಲುವೆನೆಂದು ವಿನೋದ ಬೆದರಿಸದಿದ್ದರೆ, ಇಷ್ಟರೊಳಗಾಗಲೇ ಅವನಿಚ್ಛೆ ಪೂರ್ಣವೂ ಆಗುತ್ತಿತ್ತು. ಗೋಕುಲನಿಗೆ ಕುತೂಹಲ: ಎಂ ಎ. ಹ ಪದಕ ಹೆಣ್ಣಿರುತ್ತದೆಯೋ! ಅದು ಬಂದರೆ ಎಲ್ಲಿಡಬೇಕು, ಹೇಗಿಡಬೇಕು!

ವಿನೋದ ಎಂ. ಎ. ದ ಅಭ್ಯಾಸ ಬಿಟ್ಟುದನ್ನು ಕೇಳಿ ಗೋಕುಲನ ಹೃದಯಕ್ಕೆ ಬರೆಕೊಟ್ಟಂತಾಯಿತು. ಆದರೆ ಇಂದವನು ಅತ್ಯಂತ ಪ್ರಯತ್ನದಿಂದ ಸಾವರಿಸಿಕೊಂಡು ನುಡಿದ: "ಅವ್ವನನ್ನು ಹೊಸಮನೆಗೆ ಕರೆದುಕೊಂಡೇನೋ ಹೋಗುತ್ತೀ; ಆದರೆ ಹೊಟ್ಟೆಯ ವಿಚಾರ?"

"ಆಗುವುದಾಗುತ್ತದೆ." ಎಂದು ವಿನೋದ ಮುಂದೆ ಸಾಗಿದ. ತಾಯಿಯಂತೆ ಅವನೂ ಅಲ್ಪಭಾಷಿ. ಇಷ್ಟು ಹೊತ್ತು ತಾಯಿಯಿಂದ ಕೇಳಿದ ಯಾವುದನ್ನೂ ಅಣ್ಣನ ಮುಂದೆ ಹೇಳಲಿಲ್ಲ.

ಗೋಕುಲ ಮನೆಯೊಳಗೆ ಕಾಲು ಇಡು ಇಡುತ್ತಲೆ 'ಅವ್ವವರು ತುಸ ಕರೆದಿದ್ದಾರೆ' ಎಂದು ಹಾವುನ ತಾಯಿ ಹೇಳಿದಳು. ಅವನು ನೆಟ್ಟಗೆ ತಾಯಿಯ ಕೋಣೆಗೇ ಹೋಗಿ ನೋಡಿದ. ಈ ಸಂಜೆಯ ಹೊತ್ತಿನೊಳಗೇ ಅವ್ವ ಮಲಗಿಬಿಟ್ಟಿದ್ದಾಳೆ.

ಎದ್ದು ಕುಳಿತು ಭವಾನಿ ಹೇಳಿದಳು: "ಗೋಕುಲ, ನಾಳೆ ಬೆಳಗ್ಗೇ ನಾವು ಹೋಗುವೆವು."

ಮೊದಲೇ ವಿನೋದನಿಂದ ಕೇಳಿ ಅವನ ಹೊಟ್ಟೆಯೊಳಗೆ ಉರಿಯುತ್ತಿತ್ತು. ತಟ್ಟನೆ ನುಡಿದು ಬಿಟ್ಟ: "ನಿಮ್ಮ ಕಾಲಿಗೆ ನಾವೇನು ಬೇಡಿ ಹಾಕಿಲ್ಲ. ಎಲ್ಲಿ ಬೇಕಾದಲ್ಲಿ ಹೋಗಿರಿ; ಅದರೊಳಗೆ ನಮ್ಮದೇನಿದೆ? ಹೋದರೆ ಸುಖ—"

ಎಂದು ಗೋಕುಲ ಮೋರೆ ಬಿಗಿದುಕೊಂಡು ಹೊರಟು ಹೋದ.

ಮರುದಿನ ಮುಂಜಾನೆ ಭವಾನಿ ಹೊರಡುವ ಉದ್ಯೋಗ ನಡೆಸಿದ್ದಳು. ಹಾವುನ ತಾಯಿ ಹತ್ತಿರ ಕುಳಿತು ನೆರವಾಗುತ್ತಿದ್ದಳು. ಅಂಗಳದಲ್ಲಿ ನಿಂತು ಗೋಕುಲ ಒದರಿ ಹೇಳಿದ: "ಹಾವುನ ತಾಯಿ, ಇಂದವರಿಗೆ ಹೋಗಬಾರದೆಂದು ಹೇಳು."

"ಏಕೆ ದೊಡ್ಡ ಬಾಬೂ?" ಆಶ್ಚರ್ಯದಿಂದ ಅವಳು ಕೇಳಿದಳು.

"ಇಂದು ಷಶಮಿಯಲ್ಲವೆ? ಮಕ್ಕಳು ಮರಿ ಇದ್ದ ಮನೆ. ಇಂದು ಹೋಗುವುದು ಅಮಂಗಲವಲ್ಲವೆ? ಈವೊತ್ತೇನು ಹೋಗಗೊಡುವುದಿಲ್ಲ, ಹೇಳು. ಬೇಕೆಂದರೆ ನಾಳೆ ಹೋಗಲಿ. ಬಂಡಿಯನ್ನು ತಿರುಗಿ ಕಳಿಸಿಬಿಟ್ಟೆ." ಎಂದು ನುಡಿದು ಗೋಕುಲ ಲಗುಬಗೆಯಿಂದ ಹೊರಟಿದ್ದ. ಮನೋರಮೆ

ಕೈಮಾಡಿ ಮರೆಯಲ್ಲಿ ಕರೆದು ಅವನಿಗೆಂದಳು : "ಹೋಗುತ್ತಿದ್ದರು, ಏಕೆ ತಡೆದಿರಿ ?"

ಈ ಕೆಲ ದಿನಗಳಲ್ಲಿ ಗಂಡಹೆಂಡಿರ ಮನಸು ಕೂಡುತ್ತ ಬಂದಿತ್ತು ಈಗೊಮ್ಮಿಗಿಲೆ ಸಿಟ್ಟಿಗೆದ್ದು ಗೋಕುಲ ಕೂಗಾಡಿದ: "ತಡೆಯುತ್ತೇನೆ—ನನ್ನ ಮನಸು ! ಮನೆಯ ಯಜಮಾನಿ, ಕೆಟ್ಟದಿನ ಕೆಟ್ಟ ಮುಹೂರ್ತದೊಳಗೆ ಮನೆ ಬಿಟ್ಟುಹೋದರೆ, ಮಕ್ಕಳು ಮರಿ ಪಟಪಟ ಸತ್ತುಹೋದರೆ ?" ಎಂದು ರಭಸದಿಂದ ಹೊರಟುಹೋದ.

"ನೋಡಿದಿರಾ ಭಂಗಿ !" ಕ್ರೋಧ ವಿಸ್ಮಯಗಳಿಂದ ಅವಾಕ್ಕಾಗಿ ಮನೋರಮೆ ನುಡಿದಳು.

೧೨

ದಶಮಿ ಆಯಿತು, ಏಕಾದಶಿಯಾಯಿತು, ದ್ವಾದಶಿಯೂ ಆಯಿತು. ತಾಯಿಯನ್ನು ಕಳಿಸಲಿಕ್ಕೆ ಒಳ್ಳೆಯ ತಿಥಿ ನಕ್ಷತ್ರ ಗೋಕುಲನಿಗೆ ಸಿಕ್ಕಲಿಲ್ಲ. ತ್ರಯೋದಶಿಯ ದಿನ ಮನೆಯ ಪುರೋಹಿತ ಬಂದು ಒಳ್ಳೆಯ ಮುಹೂರ್ತ ವಿದೆಯೆಂದು ತಿಳಿಸುತ್ತಲೇ ಗೋಕುಲ ಕಾಯ್ದುಬಿಟ್ಟ. "ನೀವು ಯಾರದನ್ನು ಉಣ್ಣುವಿರೋ ಅವರ ಸರ್ವನಾಶ ಮಾಡುವಿರಾ ? ಹೋಗಿರಿ; ಏನೂ ಕೆಲಸ ವಿಲ್ಲವೆ ? ನಾ ಅವ್ವನನ್ನು ಎಲ್ಲಿಗೂ ಕಳಿಸುವುದಿಲ್ಲ !" ಎಂದ.

ಮೊನ್ನೆ ಪೆಟ್ಟು ತಿಂದಂದಿನಿಂದ ಮನೋರಮೆ ತಾ ಮಾತಾಡುತ್ತಿರಲಿಲ್ಲ. ತಂದೆಯನ್ನು ಕಳಿಸಿ ಕೊಟ್ಟಳು. "ತಮ್ಮಾ, ಹೀಗೆ ಮಾಡುವುದು ತಕ್ಕದ್ದಲ್ಲ" ಎಂದು ಹೇಳಿದ ನಿಮಾಯಿ ಬಂದು.

ಗೋಕುಲ ಎಂದೂ ಪತ್ರಿಕೆ ಓದುವವನಲ್ಲ. ಇಂದು ಓದುತ್ತ ಕುಳಿತಿದ್ದ. "ಏನು ?" ಎಂದ.

"ಬೀಗಿತ್ತಿ ತನ್ನ ಮಗನ ಮನೆಗೆ ತಾನಾಗಿ ಹೋಗಬೇಕೆನ್ನುವಾಗ ತಡೆಯುವುದು ಉಚಿತವಲ್ಲ."

ಗೋಕುಲ ಓದುತ್ತೋದುತ್ತಲೇ ಹೇಳಿದ: "ಊರ ಜನ ಕೇಳಿದರೆ ನನಗೆ ಛೀ ಎಂದಾರು."

ನಿಮಾಯಿ ಸೋಜಿಗಗೊಂಡು, "ಛೀ ಎನ್ನಲಿಕ್ಕೆ ನನಗೇನೂ ಕಾರಣ ಕಾಣುವುದಿಲ್ಲ" ಎಂದ.

ಇಷ್ಟು ದಿನ ಗೋಕುಲ ಮಾವನೊಂದಿಗೆ ಗೌರವದಿಂದಲೇ ನಡೆದು ಕೊಳ್ಳುತ್ತಿದ್ದ. ಆದರಿಂದೊಮ್ಮೆಲೆ ಉರಿದೆದ್ದು ಹೇಳಿದ: "ನಿಮಗೆ ಕಾಣ ಬೇಕಾದ ಅಗತ್ಯವೇನಿಲ್ಲ. ನಮ್ಮವ್ವನನ್ನು ನಾ ಯಾರ ಕಡೆಯೂ ಕಳಿಸುವು ದಿಲ್ಲ, ತೀರಿತು. ಗಟ್ಟಿಮಾತು. ಯಾರಿಗೇನು ಮಾಡುವುದಿದೆ, ಮಾಡಿಕೊಳ್ಳಲಿ."

ಗೋಕುಲನ ಈ ಗಟ್ಟಿಮಾತು ವಿನೋದನ ಕಿವಿಗೆ ಮುಟ್ಟಲು ತಡ ವಾಗಲಿಲ್ಲ. ದಿನ ದಿನವೂ ತಡೆಯೊಡ್ಡಿ ಬಂಡಿಯನ್ನು ತಿರುಗಿ ಕಳಿಸುತ್ತಿದು ದಕ್ಕೆ ಅವನ ಮನಸ್ಸು ಬಹಳ ಜುಗುಪ್ಸೆಗೊಂಡಿತ್ತು. ಇಂದು ಅವನು ಪಿತ್ತ ತಲೆಗೇರಿಯೇ ಬಂದು ನುಡಿದ: "ಅಣ್ಣಾ, ಅವ್ವನನ್ನು ಈವೊತ್ತು ನಾ ಕರೆದು ಕೊಂಡು ಹೋಗುವವ. ನೀ ವ್ಯರ್ಥ ಅಡ್ಡಗಾಲು ಹಾಕಬೇಡ."

ಗೋಕುಲ ಪತ್ರಿಕೆಯೊಳಗೇ ಮತ್ತಿಷ್ಟು ಮನಸು ಹಾಕಿ "ಈವೊತ್ತಂತೂ ಶಕ್ಯವಿಲ್ಲ" ಎಂದ.

"ಶಕ್ಯವಿದೆ. ಈಗಲೇ ಕರೆದುಕೊಂಡು ಹೋಗುವೆ."

ಅವನ ಕ್ರುದ್ಧಸ್ವರ ಕೇಳಿ ಗೋಕುಲ ಕೈಯೊಳಗಿನ ಪತ್ರಿಕೆಯನ್ನು ಬೀಸಾಡಿ ಎಂದ: "ಕರೆದುಕೊಂಡು ಹೋಗುವೆ ಎಂದ ಮಾತ್ರಕ್ಕೆ ಆಯಿತೆ? ಅಪ್ಪ ಸಾಯುವಾಗ ತಾಯಿಯನ್ನು ನನಗೊಪ್ಪಿಸಿದ್ದಾನೆ, ನಿನಗಲ್ಲ. ನಾ ಎಲ್ಲಿಯೂ ಕಳಿಸುವುದಿಲ್ಲ."

"ನಿಜವಾಗಿಯೂ ನೀ ಈ ಭಾರ ಹೊರಲಾರೆ, ಅಣ್ಣಾ, ಹಾಗಿದ್ದರೆ ದಿನ ಬೆಳಗಾದರೂ ಅವ್ವ ಇಷ್ಟು ಅಪಮಾನ ತಿರಸ್ಕಾರ ಸೋಸಬೇಕಾಗುತ್ತಿರ ಲಿಲ್ಲ. ಅವ್ವಾ, ಬಾ ಹೊರಗೆ. ಬಂಡಿ ಬಂದು ನಿಂತಿದೆ." ಎಂದು ವಿನೋದ ಹಿಂದಿರುಗಿ ನೋಡುವಾಗಲೇ ತಾಯಿ ಹೊರಗೆ ಬಂದಳು. ಅವಳು ಮೊದಲೇ ಬಂದು ಮರೆಯಲ್ಲಿ ನಿಂತುದು ಗೋಕುಲನಿಗೆ ಗೊತ್ತಿರಲಿಲ್ಲ. ಅವಳು ನೆಟ್ಟಗೆ ಹೋಗಿ ಬಂಡಿ ಹತ್ತಿದುದನ್ನು ನೋಡಿ ಅವನು ನಿಶ್ಚೇಷ್ಟನಾಗಿ ನಿಂತುಬಿಟ್ಟ. ಕೊನೆಗೆ ಹಿಂದೆ ಹಿಂದೆ ಹೋಗಿ ಹೇಳಿದ: "ಈ ರೀತಿ ಹಟದಿಂದ ಹೊರಟು ಹೋದರೆ, ಮುಂದೆ ನಮ್ಮ ನಿಮ್ಮ ಸಂಬಂಧವೇ ಉಳಿಯಲಿಕ್ಕಿಲ್ಲ ಕಂಡೆಯಾ, ಅವ್ವ!"

ಭವಾನಿ ಮಾತನಾಡಲಿಲ್ಲ. ವಿನೋದ ಬಂಡಿಯವನಿಗೆ ಬಂಡಿ ಬಿಡಲು ಹೇಳಿದ. ಬಂಡಿ ಸಾಗುತ್ತಲೇ ಗೋಕುಲ ಗದ್ಗದ ಕಂಠದಿಂದ, "ನನ್ನನ್ನು ನೂಕಿ ಹೊರಟುಬಿಟ್ಟೆಯಾ? ನಾ ನಿನ್ನ ಮಗನಲ್ಲವೆ ಅವ್ವಾ? ನನ್ನನ್ನು ನೀನೇ ಸಾಕಿ ಸಲಹಿ ಬೆಳೆಸಲಿಲ್ಲವೆ?" ಎಂದ.

ಬಂಡಿಯ ಸದ್ದಿನಲ್ಲಿ ಭವಾನಿಗೆ ಆ ಮಾತು ಕೇಳಲಿಲ್ಲ; ಆದರೆ ವಿನೋದ ನಿಗೆ ಕೇಳಿಸಿತು. ಅವನು ಮುಖ ಚಾಚಿ ನೋಡಿದ: ಗೋಕುಲ ದುಪ್ಪ ಟಿಯ ಸೆರಗಿನಿಂದ ಮುಖ ಮುಚ್ಚಿಕೊಂಡು ದ್ರುತವೇಗದಿಂದ ಒಳಗೆ ಹೊಕ್ಕ.

ಗೋಕುಲ ವಿನೋದನ ಕೋಣೆಯೊಳಗೆ ಹೋಗಿ ಬಾಗಿಲಿಕ್ಕಿಕೊಂಡು ಬಿದ್ದುಕೊಂಡ. ಅಳಿಯನ ಈ ನಡತೆಯಿಂದ ಮಾವನಿಗೆ ಗಾಬರಿ. ಆದರೆ ಸ್ವಲ್ಪ ಹೊತ್ತಿನ ತರುವಾಯ ಗೋಕುಲ ಹೊರಗೆ ಬಂದು, ಸಕಾಲದಲ್ಲಿ ಸ್ನಾನಾಹಾರ ತೀರಿಸಿ ಅಂಗಡಿಗೆ ಹೊರಟುಹೋದ. ಆಗಿನ ಅವನ ಮುಖಭಾವದಲ್ಲಿ, ಆಚರಣೆಯಲ್ಲಿ ವಿಶೇಷ ಭಯಗೊಳಿಸುವ ಲಕ್ಷಣವೇನೂ ಇಲ್ಲದುದನ್ನು ಕಂಡು ನಿಮಾಯಿ ಸಮಾಧಾನದ ಉಸಿರುಗರೆದು, ನಿರ್ವಿಘ್ನವಾಗಿ ತನ್ನ ಕೆಲಸಕ್ಕೆ ತೊಡಗಿದ. ಅರ್ಥಾತ್, ಹಾವು ತನ್ನ ಬೇಟೆಯನ್ನು ಸಾವಕಾಶವಾಗಿ ಅರ

ಗಿಸಿಕೊಳ್ಳುವಂತೆ, ಅತ್ಯಂತ ಉಲ್ಲಾಸದಿಂದ ಅಳಿಯನನ್ನು ಜೀರ್ಣಿಸಿಕೊಳ್ಳುವ ಉದ್ಯೋಗಕ್ಕೆ ಹತ್ತಿದ.

ಅತ್ಯಂತ ಅನುಕೂಲ ಲಕ್ಷಣಗಳೇ ಕಂಡುಬಂದವು. ತಂದೆ ಸತ್ತಂದಿನಿಂದಲೂ ಗೋಕುಲ ತೀರ ಅಸಹಿಷ್ಣು, ಅತಿ ಉಗ್ರ ಆಗಿಬಿಟ್ಟಿದ್ದ. ಸಾಮಾನ್ಯ ಕಾರಣಕ್ಕಾಗಿಯೂ ಗದಾಪರ್ವ ಮಾಡಿಬಿಡುತ್ತಿದ್ದ. ಆದರೆ ಭವಾನಿ ಹೋದ ದಿನದಿಂದ ಬೇರೆಯಾಗಿಬಿಟ್ಟಿದ್ದಾನೆ. ಯಾರೇನು ಮಾಡಿದರೂ ಸಿಟ್ಟಿಗೇಳುವುದಿಲ್ಲ, ಇದಿರಾಡುವುದಿಲ್ಲ. ಇದರಿಂದ ನಿಮಾಯಿ ಎಷ್ಟೇ ಪುಲಕಿತನಾದರೂ ಅವನ ಮಗಳಿಗೆಷ್ಟೂ ಆನಂದವಿಲ್ಲ. ಗೋಕುಲನನ್ನು ಆಕೆ ಬಲ್ಲಳು. ಈಗ ಉಣಿಸು ತಿನಿಸಿನ ಬಗ್ಗೆ ಗಂಡನ ಟಿಸಿಪಿಸಿಯೇ ಇಲ್ಲ, ಹಾಕಿದುದನ್ನು ಸುಮ್ಮನುಂಡು ಹೋಗುತ್ತಾನೆ ಎಂಬುದನ್ನು ಲಕ್ಷಿಸಿ ಅವಳು ಬೆದರಿದಳು. ತಿನ್ನುಣ್ಣುವುದರಲ್ಲಿ ಗೋಕುಲ ಚಿಕ್ಕಂದಿನಿಂದಲೂ ಸೊಗಸುಗಾರ. ಮಂದಿಗೆ ಉಣಿಸುವುದರಲ್ಲಿಯೂ ಅವನಿಗೆ ಬಹಳ ಮೆಚ್ಚಿಕೆ. ಪ್ರತಿ ರವಿವಾರವೂ ಗೆಳೆಯರನ್ನು ಆಮಂತ್ರಿಸುತ್ತಿದ್ದ. ಈ ರವಿವಾರ ಆ ಏರ್ಪಾಡನ್ನು ಕಾಣದೆ ಮನೋರಮೆ ಏಕೆಂದು ಕೇಳಿದಳು.

"ಅದೆಲ್ಲಾ ಅವ್ವನ ಹಿಂದೆ ಹೋಗಿಬಿಟ್ಟಿತು. ಅಡಿಗೆ ಮಾಡಿ ಹಾಕುವರು ಯಾರು?" ಔದಾಶೀನ್ಯದಿಂದ ಗೋಕುಲ ನುಡಿದ.

"ಅಡಿಗೆ ಮಾಡಲಿಕ್ಕೆ ಅವ್ವ ಒಬ್ಬರೇ ಕಲಿತಿದ್ದಾರೆಯೆ? ನನಗೆ ಬರುವುದಿಲ್ಲವೆ?" ಎಂದಳು ಮನೋರಮೆ ಅಭಿಮಾನ ಭರದಿಂದ.

"ಅದನ್ನು ನಿಮ್ಮ ಅಪ್ಪಗೆ ಅಣ್ಣಗೆ ಉಣಿಸು, ನನಗೇನು ಅಗತ್ಯವಿಲ್ಲ."

ಮನೋರಮೆಯ ತಾಯಿ ಕಾಲೀ ಘಾಟಿನಿಂದ ತಿರುಗಿ ಹೋಗುವಾಗ ಒಂದು ದಿನ ಬಂದಳು. ಮಲಅತ್ತೆ ಸೆಟೆಗೊಂಡು ಹೋಗಿದ್ದಾಳೆ, ಮಗಳ ಮುರಿದ ಬಾಳುವೆ ಸರಿಗೊಳಿಸಿ ಕೊಡುವುದು ಅಗತ್ಯ ಎಂದು ಯೋಚಿಸಿ ಅವಳು ನಾಲ್ಕು ದಿನ ಇದ್ದು ಹೋಗಲು ಸಂಕಲ್ಪಿಸಿದಳು.

ಹಾಹಾ ಎನ್ನುವುದರೊಳಗೆ ಮುರಿದ ಸಂಸಾರದ ರಿಪೇರಿಯಾಯಿತು. ಅವಳು ಕರ್ಣಧಾರಳಾಗಿ ಬಿಗುವಿನಿಂದ ರಥ ನಡೆಸತೊಡಗಿದಳು. ಮೊದ ಮೊದಲು ಓಣಿಯ ಜನ ಈ ವಿಷಯವನ್ನೆತ್ತಿ ಕುಜುಬುಜು ಮಾಡಿದರು. ಆದರೆ ಮೂರು ನಾಲ್ಕು ದಿನಗಳಲ್ಲಿಯೇ ಇದು ಕಲಿಧರ್ಮದ ಸದರಿನಲ್ಲಿ ಸೇರಿ ತಣ್ಣಗಾಯಿತು.

ಹಾವ್ರನ ತಾಯಿಯ ಮನೆಯ ಹಾದಿ ಇಲ್ಲಿಯೇ ಹಾಯುವುದು. ಅವಳಿಂದ ಭವಾನಿ ಗೋಕುಲನ ಹೊಸ ಬಾಳಿನ ಕತೆ ಕೇಳಿದಳು. ಆದರೆ ಆ ಬಗ್ಗೆ ಚಕಾರ ಶಬ್ದ ಏನೂ ಮಾತನಾಡಲಿಲ್ಲ.

ಆ ದಿನ ಗೋಕುಲ ಬಂಡಿಯ ಹಿಂದೆ ಬಂದು, ಗದ್ಗದ ಕಂಠದಿಂದ 'ಇಂದಿಗೆ ನಮ್ಮ ನಿಮ್ಮ ಸಂಬಂಧ ಕಡಿಯಿತು' ಎಂದಾಗ ಅಭಿಮಾನದಿಂದ ಅತ್ತ ಲಕ್ಷ್ಯಗೊಟ್ಟಿರಲಿಲ್ಲ ಭವಾನಿ. ಆದರೆ ಒಂದು ತಿಂಗಳು ಕಳೆದರೂ ಗೋಕುಲ ತಮ್ಮನ್ನು ವಿಚಾರಿಸದಿರಲು ಅವಳು ಅಧೀರಳಾದಳು. ಇಷ್ಟೊಂದು ಪ್ರಕರಣ ಆಗಿದ್ದರೂ, ಅವನು ನಿಜವಾಗಿಯೂ ತನ್ನನ್ನು ಬಿಟ್ಟುಬಿಡಬಹುದು, ತಮ್ಮನನ್ನು ತಳ್ಳಿಬಿಡಬಹುದು ಎಂದವಳು ನಂಬಿರಲಿಲ್ಲ. ಆದರೆ ಈಗ ಮನೆಯಲ್ಲಿ ಅವನ ಅತ್ತೆ ಮಾವಂದಿರ ಸಿಂಹಾಸನ ದೃಢವಾಗಿರುವುದನ್ನು ಕೇಳಿದಾಗ ಭವಾನಿ ಸ್ತಬ್ಧಳಾದಳು ಮಾತ್ರ.

ಹೊಸಮನೆಗೆ ಬಂದ ಹೊಸದರಲ್ಲಿ ನಾಲ್ಕು ದಿನ ವಿನೋದ ಸಂಯಮದಿಂದಿದ್ದ. ಐದನೆಯ ದಿನ ತನ್ನ ಸ್ವರೂಪ ತೋರಿಸತೊಡಗಿದ. ತಾಯಿಯ ಯೋಗಕ್ಷೇಮ ವಿಚಾರಿಸುವುದನ್ನು ಬಹುಶಃ ಬಿಟ್ಟುಬಿಟ್ಟ; ರಾತ್ರಿ ಮನೆಯೊಳಗೇ ಇರುತ್ತಿರಲಿಲ್ಲ; ಅವನು ಬೆಳಿಗ್ಗೆ ಮನೆಗೆ ಬಂದಾಗ ವ್ಯಥೆಯಿಂದ ಲಜ್ಜೆಯಿಂದ ಭವಾನಿಗೆ ಅವನ ಮುಖದ ಕಡೆ ನೋಡುವುದೇ ಆಗುತ್ತಿರಲಿಲ್ಲ.

ಅವನು ನೌಕರಿ ಮಾಡುತ್ತಿದ್ದಾನೆ ಎಂದಿಷ್ಟೆ ಗೊತ್ತು. ಯಾವ ಕೆಲಸ ವೇತನ ಎಷ್ಟು ಯಾವುದೂ ತಿಳಿಯದು. ಆದರವಳಿಗೊಂದು ಸಮಾಧಾನ:

ಮಗನನ್ನು ಐಶ್ವರ್ಯದಿಂದ ವಂಚಿಸಿದುವೇನು ಅನ್ಯಾಯವಾಗಲಿಲ್ಲ: ಗೋಕುಲ ಹೆಂಡತಿ ಅತ್ತೆಮಾವಂದಿರ ಪ್ರಭಾವದಿಂದ ತಮಗೆಷ್ಟು ಅನ್ಯಾಯ ಮಾಡಿದರೂ ಗಂಡ ಕಷ್ಟದಿಂದ ಗಳಿಸಿಬೆಳೆಸಿದ ಅಂಗಡಿಯನ್ನವನು ಕೊನೆತನಕ ಉಳಿಸುವನು! ಸ್ವರ್ಗಸ್ಥನಾದ ಗಂಡನ ಮಾತು ನೆನಪಾಗಿ ಅವಳ ಮನಸು ನಸು ಹಗುರೆನಿಸುವುದು. ಹೀಗೆ ದಿನ ಕಳೆಯುತ್ತಿದ್ದವು.

ಇಂದು ವೈಶಾಖೀ ಸಂಕ್ರಾಂತಿ. ಪ್ರತಿ ವರುಷವೂ ಈದಿನ ಭವಾನಿ ಸಡಗರದಿಂದ ಬ್ರಹ್ಮಭೋಜನ ಮಾಡಿಸುತ್ತಿದ್ದಳು. ಈಸಲ ಅವಳ ಹತ್ತಿರ ದುಡ್ಡಿಲ್ಲ; ಒಂದೆರಡು ಸಲ ವಿನೋದನ ಮುಂದೆ ಆಡಿದಳು, ಅವನು ಯಾವ ಮಾತೂ ಆಡಲಿಲ್ಲ; ಆದುದರಿಂದ ಭವಾನಿ ಆ ವಿಚಾರವನ್ನೇ ಬಿಟ್ಟುಬಿಟ್ಟಿದ್ದಳು. ಚುಮು ಚುಮು ನಸುಕಿನಲ್ಲಿಯೇ ಗೋಕುಲ ಗಡಿಬಿಡಿಯಿಂದ ಬಂದ. ಸಂಗಡ ಕೆಲ ಆಳುಗಳು ತುಪ್ಪ, ಕಣಕ, ತರತರದ ಮಿಠಾಯಿ, ಬುಟ್ಟಿ ಬುಟ್ಟಿ ಮಾವಿನ ಹಣ್ಣು ತಂದಿದ್ದರು. ಗೋಕುಲ ಹೇಳಿದ: "ಓಣಿಯ ಬ್ರಹ್ಮಣರಿಗೆಲ್ಲ ನಾ ಸ್ವತಃ ಹೋಗಿ ಔತಣ ಕೊಟ್ಟು ಬಂದಿದ್ದೇನೆ. ಆ ಮಂಗಸನ್ನು ನಂಬಿಕೊಂಡು ಸುಮ್ಮನೆ ಕೂಡುವುದಕ್ಕಾಗಲಿಲ್ಲ. ಅವ್ವ ಎಲ್ಲಿ? ಇನ್ನೂ ಎದ್ದಿರಲಿಕ್ಕಿಲ್ಲ. ಆಗಲಿ, ಹೋಗಿ ಕೆಲಸಕ್ಕೆ ಜನರನ್ನು ಕಳಿಸುತ್ತೇನೆ. ತಾಯಿಯ ಹಾಗೆ ಮಗ. ಒಬ್ಬರಿಗೂ ದರಕಾರವಿಲ್ಲ. ಎಲ್ಲಕ್ಕೂ ನಾನೇ ಆಗಬೇಕು! ಅವ್ವಗೆ ಹೇಳು, ಹಾವುನ ತಾಯಿ, ನಾ ಒಂದೆರಡು ಗಂಟೆಗಳಲ್ಲಿ ಬರುತ್ತೇನೆ." ಎಂದು ಗೋಕುಲ ಬಂದಂತೆಯೆ ಗಡಿಬಿಡಿಯಿಂದ ಹೋಗಿಬಿಟ್ಟ.

ಭವಾನಿ ಎದ್ದು ಎಷ್ಟೋ ಹೊತ್ತಾಗಿತ್ತು. ಮರೆಯಲ್ಲಿ ನಿಂತು ಎಲ್ಲ ನೋಡಿದಳು. ಗೋಕುಲ ಹೋಗುತ್ತಲೇ ಅವಳ ಕಣ್ಣುಗಳಿಂದ ದಳದಳ ನೀರು ಹರಿಯಿತು. ಅಂದು ರವಿವಾರ. 'ಶನಿವಾರದ ರಾತ್ರಿ' ಪೂರಯಿಸಿಕೊಂಡು ವಿನೋದ ಹೊತ್ತೇರಿ ಬಂದು, ಎಲ್ಲ ನೋಡಿ ಅವಾಕ್ಕಾದ. ಹಾವುನ ತಾಯಿಯಿಂದ ತಿಳಿದುಕೊಂಡು ತಾಯಿಗೆ ಕೇಳಿಸುವಂತೆ, "ಅಣ್ಣನಿಗೆ ತಿಳಿಸಿ

ತರಿಸುವುದಕ್ಕಿಂತ ನನಗೆ ತಿಳಿಸಬೇಕಿತ್ತು. ಇದು ನನಗೆಷ್ಟು ಅಪಮಾನ!" ಎಂದ.

ಭವಾನಿ ಸುಮ್ಮನಿದ್ದಳು. ಗೋಕುಲ ತಿರುಗಿಬಂದು ವಿನೋದನನ್ನು ಕಂಡೂ ಕಾಣದಂತಿದ್ದ. ಕೆಲಸದ ಮೇಲ್ವಿಚಾರಣೆ ಮಾಡುತ್ತ ಅಡ್ಡಾಡಿದ. ಸಕಾಲಕ್ಕೆ ಬ್ರಾಹ್ಮಣ ಭೋಜನವೂ ಆಯಿತು. ಕೊನೆಗೆ ಗೋಕುಲ ಯಾರೊಡನೆಯೂ ಮಾತನಾಡದೆ ಹೊರಡಲುದ್ಯುಕ್ತನಾದ. ಬನರ್ಜಿ ಮಹಾಶಯರು ಕೂಗಿ ಕರೆದು "ಕೂಡ್ರು" ಎಂದರು.

ಅವರೂ ಗೋಕುಲನಿಂದ ಆಮಂತ್ರಿತರಾಗಿ ಬಂದವರು. ಎಂತಲೇ ಅವನ ವೆಚ್ಚದಿಂದ ಭೋಜನ ಮಾಡಿದ ಪರಿತೋಷದಿಂದ ಆ ದಿನದ ಅಪಮಾನದ ಮುಯ್ಯಿ ತೀರಿಸಲು ಅನುವಾದರು. ಮಜುಮದಾರ ಮನೆತನದವರ ಬಹಳ ಅನ್ನವನ್ನು ಅವರು ಜೀರ್ಣಿಸಿಕೊಂಡಿದ್ದಾರೆ. ಆದುದರಿಂದ ನಿಮಾಯಿ ರಾಯನ ದೆಸೆಯಿಂದ ಆ ದಿನ ಆದ ಅಪಮಾನ ಅವರಿಗೇ ಬಹಳ ಹತ್ತಿತ್ತು. ಎಲ್ಲರೆದುರಿಗೇ ವಿನೋದನನ್ನುದ್ದೇಶಿಸಿ ಕಣ್ಣುಬಡಿಯುತ್ತ ಅವರೆಂದರು: "ಏನು ತಮ್ಮಾ, ನಿಮ್ಮಣ್ಣನ ಇಂದಿನ ವ್ಯವಹಾರದ ಹೇತು ಗೊತ್ತಾಯಿತೆ?"

ಅವರ ಮಾತಿನ ರೀತಿಗೆ ಗೋಕುಲ ಸಂಕೋಚದಿಂದ ಇಷ್ಟಾದ.

"ಇಲ್ಲ" ಎಂದ ವಿನೋದ.

ಬನರ್ಜಿ ಮಹಾಶಯರು ಗಂಭೀರವಾಗಿ ಮೆಲುನಗೆ ನಕ್ಕು ನುಡಿದರು: "ಹಾಗಾದರೆ ನೀ ಖಟ್ಲೆ ಗೆದ್ದಹಾಗಾಯಿತು! ಬಿ. ಎ. ಎಂ. ಎ. ಆಗಿ ಇಷ್ಟು ತಿಳಿಯಲಿಲ್ಲವಲ್ಲ ನಿನಗೆ: ತಾಯಿಯನ್ನು ಬಗಲಿಗೆ ಹಾಕಿಕೊಳ್ಳುವುದಕ್ಕೆ-ಇದೆಲ್ಲ. ಖಟ್ಲೆಯೇ ಅವರ ಕೈಯೊಳಗಿದೆ."

ಗೋಕುಲನ ಮುಖ ಕಪ್ಪಿಟ್ಟಿತು. "ಎಂದೂ ಇಲ್ಲ, ಮಾಸ್ತರ್ ಮಹಾಶಯರೆ, ಎಂದೆಂದೂ ಇಲ್ಲ" ಎನ್ನುತ್ತ ವೇಗವಾಗಿ—ಹೊರಟುಬಿಟ್ಟ.

ಬನರ್ಜಿ ಕೂಗಿ ಹೇಳಿದರು : “ ತಮ್ಮಾ, ಇಲ್ಲಿ ಇವನನ್ನು ಬರಗೊಡ ಬೇಡ. ನಿಮ್ಮ ಸರ್ವನಾಶ ಮಾಡಿಬಿಡುವ. ”

ಮಾತು ಗೋಕುಲನಿಗೂ ಕೇಳಿಸಿತು. ವಿನೋದ ನಾಚಿಕೆಯಿಂದ ಮೋರೆ ಕೆಳಗೆ ಹಾಕಿದ. ಅಣ್ಣ ಅವನಿಗೆ ಅರಿಯದವನೇನಲ್ಲ. ಮನಸಿನೊಳಗೆ ಬೇರೆ ಉದ್ದೇಶವಿಟ್ಟುಕೊಂಡು ಒಂದು ಕೆಲಸ ಮಾಡುವುದು ಅವನಿಗೆ ಗೊತ್ತಿಲ್ಲವೆಂಬುದನ್ನೂ ಬಲ್ಲ. ಆದರೂ ಬನರ್ಜಿ ಮಹಾಶಯರ ಮಾತನ್ನು ಅವನು ಪೂರಾ ನಂಬದಾದನೆಂದಲ್ಲ. ಆದರೆ ಕೂಡಿದ ಜನರೊಳಗೆ ಅಣ್ಣನಿಗೆ ಅಪಮಾನವಾಯಿತಲ್ಲಾ ಎಂದು ನೊಂದುಕೊಂಡ.

ಬ್ರಹ್ಮವೃಂದ ಚದರಿತು. ವಿನೋದ ಒಳಗೆ ಹೋಗಿ ನೋಡಿದ. ತಾಯಿ ಕೋಣೆಯೊಳಗೆ ಬಾಗಿಲಿಕ್ಕಿಕೊಂಡು ಬಿದ್ದುಕೊಂಡಿದ್ದಳು. ಬನರ್ಜಿಯವರ ಮಾತು ಆಕೆಗೂ ಕೇಳಿಸಿರಬೇಕೆಂಬುದನ್ನು ಅವನಿಗೆ ಯಾರೂ ಹೇಳಬೇಕಾಗಲಿಲ್ಲ.

ಅಂಗಡಿಯ ಕೆಲಸ ಮುಗಿಸಿಕೊಂಡು ಸಂಜೆಯಾದ ಮೇಲೆ ಗೋಕುಲ ಮನೆಗೆ ಹೋದ. ಅವನ ಕೋಣೆಯೊಳಗೇ ಮುಖವಿಕಾರದ ಅಭಿನಯ ನಡೆದಿತ್ತು. ರಾಯ ಮಹಾಶಯ ಮಂಚದ ಮೇಲೆ ಮೋರೆ ಗಂಟುಹಾಕಿಕೊಂಡು ಕುಳಿತಿದ್ದ. ಮಗಳು ಎದುರಿಗೆ ಕೆಳಗೆ ಕುಳಿತು ತಂದೆಯ ಮುಖಮುದ್ರೆಯ ಅನುಕರಣ ಮಾಡುತ್ತಲಿದ್ದಳು.

ಅಳಿಯ ಕೋಣೆಯೊಳಗೆ ಕಾಲಿಡುತ್ತಲೇ ರಾಯ ನುಡಿದ : “ ನೀನು ಮೂರ್ಖನ ಹಾಗೆ ನಿಮ್ಮ ತಾಯಿಯಿಂದ ನಮಗೆ ಅಪಮಾನ ಮಾಡಿಸಿದೆಯಲ್ಲ, ಅದಕ್ಕೆ ಪ್ರತೀಕಾರವೇನು ಹೇಳು. ”

ಮೊದಲೇ ಗೋಕುಲನ ಮನಸು ಇನ್ನಿಲ್ಲದಷ್ಟು ಕಲಕಿಹೋಗಿತ್ತು. ಮೇಲೆ ಇಡೀ ದಿನ ದುಡಿದ ದಣಿವು. ಆದರಲ್ಲಿ ಇಂತಹ ಹೊಡೆತ. ಅವನ

ಮೈಯೆಲ್ಲ ಉರಿಯಿತು. ಮನೋರಮೆ ಬಿಕ್ಕಿಬಿಕ್ಕಿ ಅಳುತ್ತ ನುಡಿದಳು: "ನೀವಿನ್ನೆಂದಾದರೂ ಅಲ್ಲಿಗೆ ಹೋದಿರೆಂದರೆ ನಾ ಉರುಲು ಹಾಕಿಕೊಂಡು ಸಾಯುವೆ."

ಮಗಳ ಮಾತಿನಿಂದ ಉತ್ಸಾಹಗೊಂಡು ನಿಮಾಯಿ ಮತ್ತಷ್ಟು ಗಂಭೀರ ವಾಗಿ ನುಡಿದ: "ಆ ಹೆಂಗುಸೇನು ಸಾಮಾನ್ಯಳೆ—"

ಗೋಕುಲ ಬಾಂಬಿನಂತೆ ಸಿಡಿದ: "ಸಾಕು ಸುಮ್ಮನಿರ್ರಿ. ನಮ್ಮಪ್ಪನಿಗೆ ಇಂಥ ಮಾತಾಡಿದರೆ ಕತ್ತು ಹಿಡಿದು ಹೊರಗೆ ತಳ್ಳುವೆ." ಎಂದು ಬಿರುಗಾಳಿ ಯಂತೆ ತಾನೇ ಹೊರಟುಹೋದ.

ತಂದೆ ಮಕ್ಕಳು ಸಿಡಿಲು ಬಡಿದಂತಾಗಿ ಒಬ್ಬರ ಮೋರೆ ಒಬ್ಬರು ನೋಡ ತೊಡಗಿದರು. ಗೋಕುಲ ಇದೇನು ಮಾಡಿದ! ಪೂಜ್ಯಪಾದ ಶ್ವಶುರ ಮಹಾಶಯರಿಗೆ ಭಯಂಕರ ಅಪಮಾನ ಮಾಡಿಬಿಟ್ಟ!

೧೩

ವಿನೋದನಿಗೊಂದು ಮಿತ್ರರ ಗುಂಪು ಸಿದ್ಧವಾಯಿತು. ಅವರು ಮತ್ತೆ ಮತ್ತೆ ವ್ಯಾಜ್ಯಹೂಡಲು ಅವನನ್ನು ಪ್ರಚೋದಿಸುತ್ತಿದ್ದರು. ಏಕೆಂದರೆ ಸೋತರೆ ಅವರಿಗೆ ನಷ್ಟವಿಲ್ಲ—ಗೆದ್ದರೆ ತುಂಬ ಲಾಭ; ಬಹು ದಿನಗಳ ಅತ್ಯಂತ ಆಮೋದ ಪ್ರಮೋದಗಳ ಏರ್ಪಾಡಾಗುವುದು. ಮೊಕದ್ದಮೆಯನ್ನು ಹೂಡಲೇ ಬೇಕಾಗುವುದೆಂದು ಒಂದು ರೀತಿಯಿಂದ ನಿಶ್ಚಯವೇ ಆಗಿತ್ತು. ಏಕೆಂದರೆ, ಆಪಸಾತಿನಲ್ಲಿ ಬಗೆಹರಿಸಿಕೊಳ್ಳಲು ವಿನೋದನ ಕಡೆಯಿಂದ ಹೋದ ಮಿತ್ರ ರನ್ನು ಗೋಕುಲ, "ಆ ದುರಾಚಾರಿ ನೀಚನಿಗೆ ಒಂದು ಕವಡೆಯನ್ನೂ ಕೊಡು ವುದಿಲ್ಲ, ಮಾಡುವುದು ಮಾಡಿಕೊಳ್ಳಿರಿ," ಎಂದು ಕಳಿಸಿಬಿಟ್ಟಿದ್ದ.

ಆದರೆ ಇಷ್ಟು ದೊಡ್ಡ ಆಸ್ತಿಯ ಬಡಿದಾಟಕ್ಕೆ ಬಹಳ ಹಣ ಬೇಕು. ಅದಕ್ಕಾಗಿಯೇ ವಿನೋದ ದಿನಮೋಕ ಮಾಡುತ್ತಿದ್ದ.

ಅಣ್ಣನ ಮೇಲೆ ಎಷ್ಟೇ ಸಿಟ್ಟಿರಲೊಲ್ಲದೇಕೆ, ವೈಶಾಖ ಸಂಕ್ರಾಂತಿಯಿಂದ ವಿನೋದನಿಗೆ ಬಹಳ ಕಳವಳವಾಗುತ್ತಲಿತ್ತು. ನೆರೆದ ಜನರೊಳಗೆ ಅಪಮಾನಿತನಾಗಿ ಓಟಬಿಟ್ಟನಲ್ಲ— ಗೋಕುಲನ ಆ ಆರ್ತಮುಖದ ಚಿತ್ರ ಅವನ ಮನಃಪಟಲದಿಂದ ಮರೆಯಾಗದಾಯಿತು. ಅಂತರಂಗದಲ್ಲಿ ಕ್ಷಣಕ್ಷಣಕ್ಕೂ 'ಅನ್ಯಾಯ, ಅನ್ಯಾಯ, ಅತ್ಯಂತ ಅನ್ಯಾಯ' ಎಂದು ಧ್ವನಿಯಾಗುತ್ತಿದ್ದಿತು. ಅಲ್ಲದ ಸಲ್ಲದ ಅಪವಾದದೊಂದಿಗೆ ಅವನನ್ನು ಕಳಿಸಿಕೊಡಲಾಯಿತು. ಇನ್ನು ಅಣ್ಣ ಈ ಕಡೆಗೇ ಹಾಯಲಾರ ಎಂದು ವಿನೋದ ನಿಃಸಂದೇಹವಾಗಿ ಅರಿತಿದ್ದ.

ನಾಡಿನ ಕೃತವಿದ್ಯ ಯುವಕರಲ್ಲಿ ಅನೇಕರು ವಿನೋದನ ಗೆಳೆಯರು. ಅವನ ಬಗೆಗೆ ಪೂರ್ಣ ಸಹಾನುಭೂತಿ ಎಲ್ಲರಿಗೂ. ಅವರೆಲ್ಲರೂ ಒಂದಿನ ಹೊರಗಿನ ಕೋಣೆಯೊಳಗೆ ಸೇರಿ, ಮಾಸ್ತರ್ ಮಹಾಶಯರನ್ನು ಕರೆಸಿಕೊಂಡು ವಿಚಾರ ಮಾಡಿ, ಗೋಕುಲನನ್ನು ಮಾತಿನ ಬಲೆಯೊಳಗೆ ಹಿಡಿಯದಿದ್ದರೆ ಕೆಲಸ ಸುಲಭವಾಗದು ಎಂದು ಗೊತ್ತು ಮಾಡಿದರು. ಗೋಕುಲ ಮೂರ್ಖ, ಬಾಲಬುದ್ಧಿಯವ ಎಂದು ಎಲ್ಲರೂ ಬಲ್ಲರು. ಅವನನ್ನು ಮೈದುಂಬಿಸಿ, ಅವನ ಬಾಯಿಂದಲೇ ಎಲ್ಲ ಹೊರಡಿಸಿ ಸಾಕ್ಷಿಗಳನ್ನುಂಟು ಮಾಡುವುದು ಕಠಿನವಲ್ಲ. ಮುಂದಿನ ರವಿವಾರ ನಾಡಿನ ಎಂಟು ಹತ್ತು ಜನ ಗಣ್ಯಮಾನ್ಯ ಗೃಹಸ್ಥರನ್ನು ಕರೆದುಕೊಂಡು ಗೋಕುಲನ ಮನೆಗೆ ಹೋಗುವುದೂ ನಿಶ್ಚಿತವಾಯಿತು. ಅನುಪಸ್ಥಿತ ಹತಭಾಗ್ಯ ಗೋಕುಲನ ಬಗ್ಗೆ ಪರಿಪರಿಯ ಅಣಕ ಚೇಷ್ಟೆಗಳು ನಡೆದವು; ಯಾರು ಏನು ಮಾಡಬೇಕು, ಯಾರು ಏನು ಮಾತಾಡಬೇಕು ಅದರ ರಂಗತಾಲೀಮೂ ಆಯಿತು. ಆದರೆ ವಿನೋದ ಮಾತ್ರ ಮುಖವೆತ್ತದೆ ಮಾತನಾಡದೆ ಕುಳಿತಿದ್ದ. ತಮ್ಮ ಉತ್ಸಾಹದ ಅತಿರೇಕದಲ್ಲಿ ಅವನ ನಿರುತ್ಸಾಹ ಯಾರ ಗಮನಕ್ಕೂ ಬರಲಿಲ್ಲ.

ಅಂದು ವಿನೋದ ಕೆಲಸಕ್ಕೆ ಹೋಗಿರಲಿಲ್ಲ. ಉಂಡು ಕೋಣೆಯೊಳಗೆ ಕುಳಿತಿದ್ದ. ಒಂದು ಹೊಡಿದಿರಬಹುದು. ಅಕಲ್ಪಿತವಾಗಿ ಗೋಕುಲ "ಏನು ಹಾವುನ ತಾಯಿ, ಊಟಗೀಟ ಆಯಿತೇ?" ಎನ್ನುತ್ತ ಬಂದ.

ಅವಳು ಚಕಿತಳಾಗಿ ಎದ್ದು ಆಸನ ಕೊಟ್ಟು, “ ಇಲ್ಲ. ದೊಡ್ಡ ಬಾಬೂ, ಇನ್ನೂ ಆಗಿಲ್ಲ, ” ಎಂದಳು.

“ ಆಗಿಲ್ಲವೆ ? ” ಎಂದು ಆಸನವನ್ನು ತೆಗೆದುಕೊಂಡು ಹೋಗಿ ಗೋಕುಲ ಅಡುಗೆಮನೆಯ ಬಾಗಿಲಲ್ಲಿ ಹಾಕಿಕೊಂಡು ಕುಳಿತ. “ಒಂದು ತಾಲಿ ತಣ್ಣನೆಯ ನೀರು ಕೊಡು ಹಾವುನ ತಾಯಿ, ಕುಡಿಯಲಿಕ್ಕೆ. ಈ ಮಧ್ಯಾಹ್ನದ ಬಿಸಿಲೊಳಗೆ ವಸೂಲಿಗೆ ತಿರುಗಿ ತಿರುಗಿ ಗಂಟಲಾರಿ ಹೋಗಿದೆ. ಅವ್ವ ಎಲ್ಲಿ ? ” ಎಂದ.

ಭವಾನಿ ಅಡುಗೆಮನೆಯೊಳಗಿದ್ದಳು. ಆ ದಿನದ ಘಟನೆಯ ನೆನಪಾಗಿ ನಾಚಿಕೆಯಿಂದ ಅವಳಿಗೆ ಇದಿರಿಗೆ ಬರಲಿಕ್ಕೇ ಆಗಲಿಲ್ಲ. ವಿನೋದ ಕೆಲಸಕ್ಕೆ ಹೋಗಿದ್ದಾನೆ, ಮನೆಯೊಳಗಿಲ್ಲ ಎಂದೇ ಗೋಕುಲನ ಕಲ್ಪನೆ. ಅವನೆಂದ: “ ಎಲ್ಲಾ ಸುಳ್ಳು, ಹಾವುನ ತಾಯಿ, ಎಲ್ಲಾ ಸುಳ್ಳು ಕಲಿಕಾಲ—ಧರ್ಮ ಕರ್ಮ ಉಳಿದಿದೆಯೆ ? ಅಪ್ಪ ಸಾಯುವಾಗ ಅವ್ವನನ್ನು ನನಗೊಪ್ಪಿಸಿ, ‘ತಮ್ಮಾ ಗೊಕುಲ, ಈಕೆ ನಿನ್ನ ತಾಯಿ, ಕರೆದುಕೋ’ ಎಂದ. ನಾ ಒಳ್ಳೆಯ ಮನುಷ್ಯ- ಇಲ್ಲದಿದ್ದರೆ ಈ ವಿನೋದನ ಅಪ್ಪನಿಗಾದರೂ ಸಾಧ್ಯವೇ, ಬಲವಂತದಿಂದ ತಾಯಿಯನ್ನು ಕರೆದುಕೊಂಡು ಬರುವುದು ? ನಾ ಏನು ಹುಡುಗ ಅಲ್ಲ. ಮನಸುಮಾಡಿದರೆ ಈಗಿಂದೀಗ ಕರೆದೊಯ್ಯಲಾರೆನೆ? ಅಪ್ಪನ ನಿಜವಾದ ಉಯಿಲು ಇದೇ ಕಂಡೆಯಾ ಹಾವುನ ತಾಯಿ. ಬರೀ ಒಂದೆರಡು ಸಾಲು ಬರೆದದ್ದೇ ಉಯಿಲಲ್ಲ. ”

ಹಾವುನ ತಾಯಿ ಕಣ್ಣು ಚಿವುಟಿ ವಿನೋದ ಮನೆಯೊಳಗಿರುವುದನ್ನು ಸೂಚಿಸಿದಳು. ಗೋಕುಲ ನೀರಿನ ತಾಲಿ ಕೆಳಗಿಟ್ಟು ಪಾದರಕ್ಷೆ ಮೆಟ್ಟಿ ಕೊಂಡು ಮತ್ತೊಂದು ಮಾತನಾಡದೆ ಹೊರಟುಹೋದ.

ರಾತ್ರಿ ೯-೧೦ರ ಸುಮಾರಿಗೆ ಅಂಗಡಿಯ ಚಕ್ರವರ್ತಿ ಬಂದು, “ಅವ್ವಾ, ದೊಡ್ಡ ಬಾಬು ಇನ್ನೂ ಮನೆಗೆ ಬಂದಿಲ್ಲ ಇಲ್ಲಿಂದ ಉಂಡು ಯಾವಾಗ ಹೋದರು ? ಎಂದು ಕೇಳಿದ. ”

ಭವಾನಿಗೆ ಅಚ್ಚರಿ. "ಅವನು ಇಲ್ಲಿ ಉಣ್ಣಲಿಲ್ಲವಲ್ಲ! ವಸೂಲಿಗೆ ಹೊರಟಾಗ ಒಂದು ತಾಲಿ ನೀರು ಮಾತ್ರ ಕುಡಿದು ಹೋದ," ಎಂದಳು.

"ನೋಡಿರಿ. ಈವೊತ್ತು ದೊಡ್ಡ ಬಾಬುಗಳ ಹುಟ್ಟಿದ ದಿವಸ. ಮನೆಯೊಳಗೆ ಜಗಳವಾಡಿ, 'ತಾಯಿಯ ಪ್ರಸಾದ ತೆಗೆದುಕೊಳ್ಳುವೆ' ಎಂದು ಹೇಳಿ ಹೊರಬಿದ್ದರು. ಹಾಗಾದರೆ ಇಡೀ ದಿನ ಊಟವೇ ಇಲ್ಲ ಕಾಣ್ಣುತ್ತದೆ."

ಭವಾನಿಯ ಹೃದಯ ತಳಮಳಿಸಿತು. ಚಕ್ರವರ್ತಿಯ ದನಿ ಕೇಳಿ ವಿನೋದ ಪಕ್ಕದ ಕೋಣೆಯಿಂದ ಬಂದು ಹತ್ತಿರ ಕುಳಿತ: "ಏನು ಚಕ್ರವರ್ತಿ ಮಹಾಶಯ, ನಿಮ್ಮಾಯಿ ರಾಯರ ಕೈಕೆಳಗಿನ ನೌಕರಿ ಹೇಗೆ?" ಎಂದು ನಗೆಯೊಡನೆ ಕೇಳಿದ.

ಚಕ್ರವರ್ತಿ ಸೋಜಿಗಗೊಂಡಂತೆಯೇ ಹೇಳಿದ: "ನಿಮ್ಮಾಯಿರಾಯರೆ? ರಾಮಾ, ಅವರಿಗೆ ಅಂಗಡಿಯೊಳಗೆ ಕಾಲಿಡಲು ಸಾಧ್ಯವಾದರಷ್ಟೆ!"

"ಅಣ್ಣನನ್ನು ಅವರು ಗಿಳಂಕೃತಮಾಡಿದ್ದಾರೆಂದು ಕೇಳಿದ್ದೆ?"

ಚಕ್ರವರ್ತಿ ಭವಾನಿಯನ್ನು ತೋರಿಸಿ ನಗುತ್ತ ನುಡಿದ: "ಇವರು ಬದುಕಿರುವತನಕ ಅದು ಸಾಧ್ಯವಿಲ್ಲ ಚಿಕ್ಕ ಬಾಬೂ. ನನ್ನನ್ನು ತೆಗೆದೊಗೆದು ಸರ್ವಸ್ವಕ್ಕೂ ತಾವೇ ಒಡೆಯರಾಗಬೇಕೆಂದೇ ಬಂದಿದ್ದರು; ಆದರೆ ತಾಯಿಯ ಒಂದೇ ಒಂದು ಆಜ್ಞೆಯಿಂದ ಎಲ್ಲಾ ಫಸ್ಸಾಯಿತು. ಟಕ್ಕಿಸಿ ವಂಚಿಸಿ ನಿರ್ಲಜ್ಜ ತನದಿಂದ ಒಂದು ನಾಲ್ಕು ದುಡ್ಡು ಎಳೆದುಕೊಳ್ಳಬಹುದು, ಅಷ್ಟೆ. ಅಂಗಡಿಯೊಳಗೆ ಕೈಹಾಕಲು ಆಸ್ಪದವೇ ಇಲ್ಲ."

ಎಂದು ಚಕ್ರವರ್ತಿ ಅಂದಿನ ಕತೆಯೆಲ್ಲ ವಿವರಿಸಿದ: "ದೊಡ್ಡ ಬಾಬು ಬಲು ಸರಳ ಮನುಷ್ಯರು. ಮಂದಿಯ ಹೊಂಚು ಸಂಚು ಅವರಿಗೆ ಗೊತ್ತಾಗುವುದಿಲ್ಲ. ಆದರೇನು? ತಂದೆ ತಾಯಿಗಳಲ್ಲಿ ಅಚಲಭಕ್ತಿ—ತಾಯಿಯ ಅಪ್ಪಣೆಯನ್ನು ತೆಗೆದುಹಾಕುವುದು ಶಕ್ಯವಿಲ್ಲ ಎಂದು ಹೇಳಿಬಿಟ್ಟರು. ಅದರಿಂದ ಎಷ್ಟು ಅಳೋಣ ಕರೆಯೋಣ, ಎಷ್ಟು ಸಿಟ್ಟು ಜಗಳ, ತೀರಿಹೋಯಿತಿಲ್ಲಿಗೆ!

ಆದರೆ ನಮ್ಮ ತಂದೆಯ ಅಪ್ಪಣೆ--ತಾಯಿಯ ಅಪ್ಪಣೆ ಎಂಬುದನ್ನೇನು ಇವರು ಬಿಡಲಿಲ್ಲ. ಹಿಂದೆ ಹೇಗೆ ನಾ ಕರ್ತೃವಾಗಿದ್ದೆನೋ ಈಗಲೂ ಹಾಗೆಯೇ, ಚಿಕ್ಕಬಾಬೂ. ”

ವಿನೋದನ ಕಣ್ಣೆರಡರಲ್ಲೂ ನೀರು ಬಂತು. ಚಕ್ರವರ್ತಿ ಹೇಳತೊಡಗಿದ: “ ಇಂಥ ಅಣ್ಣ ಯಾರಿಗಾದರೂ ಇದ್ದಿರಬಹುದೆ? ಅವರ ಬಾಯೊಳಗೆ ಯಾವಾಗಲೂ ವಿನೋದ, ವಿನೋದ! ‘ ನಮ್ಮ ವಿನೋದನಂತೆ ಪಾಸಾದವರು ಯಾರೂ ಇಲ್ಲ, ನಮ್ಮ ವಿನೋದನಷ್ಟು ಕಲಿತವರನ್ನು ಯಾರೂ ನೋಡಿಲ್ಲ, ನಮ್ಮ ವಿನೋದನಂಥ ತಮ್ಮ ಯಾರಿಗೂ ಇಲ್ಲ.’ ಜನರು ನಿಮ್ಮ ಬಗ್ಗೆ ಎಷ್ಟು ಆಡಿಕೊಳ್ಳುವರು ಚಿಕ್ಕ ಬಾಬೂ; ಆದರೆ ದೊಡ್ಡ ಬಾಬು ಎನ್ನುತ್ತಾರೆ: ‘ಹೊಟ್ಟೆಕಿಚ್ಚಿನ ಸೂಳೆಮಕ್ಕಳು ಸುಮ್ಮನೆ ನಮ್ಮ ವಿನೋದನಿಗೆ ಹೆಸರಿಡುತ್ತಾರೆ. ಅದನ್ನು ನಂಬುವಷ್ಟು ನಾನು ದಡ್ಡನೆಂದು ತಿಳಿದಿದ್ದಾರೇನೋ ನೀಚರು! ”

ಸ್ವಲ್ಪ ತಡೆದು ಚಕ್ರವರ್ತಿ ಮತ್ತೆ ಹೇಳಿದ: “ ಮೊನ್ನೆಯೊಬ್ಬ ಕಾಶಿಯ ಪಂಡಿತ ಬಂದಿದ್ದ; ಅವ ನಿಮ್ಮ ಬುದ್ಧಿ ಸರಿಮಾಡುವೆನೆಂದು ಹೇಳಿ, ನೂರಾ ಎಂಟು ಬಂಗಾರದ ತುಳಸಿ ಪತ್ರಗಳ ಬೆಲೆಯನ್ನು—ಸುಮಾರು ಐನೂರು ರೂಪಾಯಿ— ದೊಡ್ಡ ಬಾಬುಗಳಿಂದ ಎತ್ತಿಕೊಂಡು ಹೋದ! ನಾ ಬೇಡೆಂದು ಕೈಯೊಳಗೆ ಕಡ್ಡಿಕೊಟ್ಟು ಹೇಳಿದೆ; ಅವರೇನು ಕೇಳಲಿಲ್ಲ. ‘ ನಮ್ಮ ವಿನೋದನಿಗೆ ಸದ್ಬುದ್ಧಿ ಬರುವುದಾದರೆ, ನಮ್ಮ ವಿನೋದ ಎಂ. ಎ. ಪಾಸಾಗುವುದಾದರೆ, ಹೋದರೆ ಹೋಗಲಿ ನನ್ನ ಐನೂರು ರೂಪಾಯಿ! ’ ಎಂದರು.”

ವಿನೋದ ಕಣ್ಣೊರಸಿಕೊಂಡು ಆರ್ದ್ರಸ್ವರದಿಂದ ನುಡಿದ: “ ನನ್ನ ಹೆಸರಿನಿಂದ ಅದೆಷ್ಟು ಜನರು ಅಣ್ಣನನ್ನು ಮರುಳುಗೊಳಿಸಿ ಸುಲಿಯುವರೆಂಬುದನ್ನು ನಾನೂ ಕೇಳಿದ್ದೇನೆ, ಚಕ್ಕೋತ್ತಿ ಮಹಾಶಯ. ”

ಚಕ್ರವರ್ತಿ ಕೆಳದನಿಯಲ್ಲಿ ಹೇಳಿದ: "ಈ ಜಯಲಾಲ ಬನರ್ಜಿಯೇನು ಕಡಿಮೆ ಸುಲಿದು ಕೊಂಡಿದ್ದಾನೆಯೇ ಚಿಕ್ಕ ಬಾಬು! ಆ ಮಗನೇ ಆ ಅನರ್ಥ ಕ್ಕೆಲ್ಲ ಮೂಲ!"

ಬಳಿಕ, ಯಜಮಾನರು ಸತ್ತಮೇಲೆ ಅವರು ವಿನೋದನಿರುವ ಸ್ಥಳ ವನ್ನು ಹುಡುಕಲು ಹೂಡಿದ ಆಟವನ್ನೂ ಚಕ್ರವರ್ತಿ ಹೇಳಿದ. ಭವಾನಿ ಯಾವುದಕ್ಕೂ ಏನೂ ಹೇಳಲಿಲ್ಲ. ಅವಳ ಕಣ್ಣೊಳಗಿಂದ ಅವಿರತವಾದ ಶ್ರಾವಣಧಾರೆ ಹರಿಯುತ್ತಿತ್ತು.

ಚಕ್ರವರ್ತಿ ಹೋದ ಬಳಿಕ ವಿನೋದ ಮಲಗಲು ಹೋದ. ಆದರೆ ಇಡೀ ರಾತ್ರಿ ಅವನಿಗೆ ನಿದ್ದೆ ಬರಲಿಲ್ಲ. ಬೆಳತನಕ ಇದೇ ಯೋಚನೆ: ಈ ಅಸ್ವಾಭಾವಿಕ ಘಟನೆ ಘಟಿಸಿತೇಕೆ? ತಂದೆ ನನ್ನನ್ನು ವಂಚಿಸಿದನೇಕೆ? ಅಣ್ಣ ನನಗೇನನ್ನೂ ಕೊಡಲೊಲ್ಲನೇಕೆ?

*　　　*　　　*　　　*

ವಿನೋದನ ಗೆಳೆಯರು ಪರಿಶ್ರಮಪಟ್ಟು ಕೆಲ ಜನ ಪ್ರತಿಷ್ಠಿತ ಸದ್ಗೃಹ ಸ್ಥರನ್ನು ಕರೆದುಕೊಂಡು ರವಿವಾರ ಮುಂಜಾನೆ ಗೋಕುಲನ ಮನೆಗೆ ಹೋದರು. ಗೋಕುಲ ಅಂಗಡಿಗೆ ಹೊರಡಲು ಅಣಿಯಾಗುತ್ತಲಿದ್ದ. ಅಕ ಲ್ಪಿತವಾಗಿ ಇಷ್ಟು ಜನ ಮಹಾಶಯರು ಬಂದುದಕ್ಕೆ ಸ್ತಂಭಿತನಾದ. ವಿಶೇಷ ವಾಗಿ ಡೆಪುಟಿ ಬಾಬುಗಳನ್ನು ಮತ್ತು ಗಿರೀಶ ಬಾಬುಗಳನ್ನು ಕಂಡು, ಇವರ ನ್ನೆಲ್ಲ ಕುಳ್ಳಿರಿಸಲಿ, ಹೇಗೆ ಕುಳ್ಳಿರಿಸಲಿ ಎಂಬಂತಾಯಿತು. ವಿನೋದ ನಿಃಶಬ್ದ ವಾಗಿ ಮ್ಲಾನ ಮುಖನಾಗಿ ಒಂದು ಕೊನೆಯಲ್ಲಿ ಹೋಗಿ ಕುಳಿತ. ಅವನ ಮೋರೆ, ಇವನನ್ನು ಬಲಿಗೊಡಲು ಹಿಡಿತಂದಿರುವರೇನೋ ಎಂಬಂತಿತ್ತು.

ಬನರ್ಜಿಯವರೂ ಇದ್ದರು. ಅವರೇ ಮಾತೆತ್ತಿದರು. ನೋಡು ನೋಡುತ್ತಿದ್ದಂತೆ ಗೋಕುಲನ ಮುಖ ಕೆಂಪೇರಿತು. "ಓಃ, ಇದಕ್ಕೆಷ್ಟು

ಜನರೇ! ಹೋಗಿರಿ ಹೋಗಿರಿ, ದಾವೆ ಮಾಡಿರಿ. ನಾ ಈ ನೀಚನಿಗೆ ಒಂದು ದಮ್ಮಡಿಯನ್ನೂ ಕೊಡುವುದಿಲ್ಲ. ಇವನು ಮದ್ಯ ಕುಡಿಯುತ್ತಾನೆ!" ಎಂದ.

ಉಳಿದವರೆಲ್ಲ ಸುಮ್ಮನಿದ್ದರು. ಬನರ್ಜಿ ಮಹಾಶಯರು ಸಾಭಿನಯ ವಾಗಿ ನಕ್ಕು ನುಡಿದರು: "ಹೌದು, ಕುಡಿಯುತ್ತಾನೆ ಎಂದು ತಿಳಿದುಕೋ. ಆದರೆ ಅವನ ಹಕ್ಕಿಗೆ ಅಡ್ಡಬರಲಿಕ್ಕೆ ನೀ ಯಾರು? ತಂದೆ ಸಾಯುವಾಗ ನೀ ಮೋಸದಿಂದ ಉಯಿಲು ಬರೆಸಿಕೊಂಡಿಲ್ಲವೆಂದು ಏತರ ಮೇಲಿಂದ?"

ಗೋಕುಲ ಬೆಂಕಿಬೆಂಕಿಯಾಗಿ ಒದರಾಡಿದ: "ಮೋಸದಿಂದ ಬರೆಸಿ ಕೊಂಡೆನೆ? ನಾ ಮೋಸಗಾರನೇ? ಯಾವ ಮಗ ಹೇಳುತ್ತಾನೆ?"

ಗಿರೀಶಬಾಬು ಹಳೆ ಮನುಷ್ಯ. ಮೃದುಕಂಠದಿಂದ ಅವರೆಂದರು: "ಗೋಕುಲ ಬಾಬೂ, ಹೀಗೆ ಆವೇಶಗೊಳ್ಳಬೇಡ, ಸ್ವಲ್ಪ ಶಾಂತವಾಗಿ ಮಾತ ನಾಡು."

ಬನರ್ಜಿ ಮಹಾಶಯರು ಹಿಂದಿನ ಹಲವು ಸಂಗತಿಗಳನ್ನು ಬಲ್ಲವರಾಗಿ ದ್ದರು. ಎಂತಲೇ ಕಣ್ಣು ಹೊರಳಿಸುತ್ತ ಹೇಳಿದರು: "ಹಾಗಾದರೆ ನಿಮ್ಮ ತಾಯಿ ಕೋರ್ಟಿನಲ್ಲಿ ಸಾಕ್ಷಿ ಹೇಳಬೇಕಾಗುವುದು"

ಅವರು ಯೋಚಿಸಿದಂತೆಯೇ ಆಯಿತು. ಗೋಕುಲ ಉನ್ಮತ್ತನಾಗಿ ಬಿಟ್ಟ. "ಏನು, ನಮ್ಮ ಅವ್ವನನ್ನು ಕೋರ್ಟಿನಲ್ಲಿ ನಿಲ್ಲಿಸುವಿರಾ, ಸಾಕ್ಷಿಗಳ ಕಟಾಂಜನದಲ್ಲಿ? ತೆಗೆದುಕೊಂಡು ಹೋಗಿರಿ ಎಲ್ಲಾ ಸಂಪತ್ತು—ನನಗೇನೂ ಬೇಕಾಗಿಲ್ಲ, ಒಯ್ಯಿರಿ. ನಾ ಕೋರ್ಟಿಗೆ ಬರುವುದಿಲ್ಲ. ಅವ್ವನನ್ನು ಕರೆದು ಕೊಂಡು ಕಾಶೀ ಸೇರುವೆ!" ಎಂದ.

ನಿಮಾಯಿ ರಾಯನೂ ಅಲ್ಲಿದ್ದ. ಅವನು ಕಣ್ಣು ಚಿವುಟಿ ಹೇಳಿದ: "ಛೀ ಗೋಕುಲ! ಏನು ಮಾತಾಡುತ್ತಿದ್ದೀ?"

ಗೋಕುಲ ಈ ಮಾತು ಕಿವಿಯೊಳಗೇ ಹಾಕಿಕೊಳ್ಳಲಿಲ್ಲ. ಎಲ್ಲರೆದುರಿಗೆ ಬಲಗಾಲನ್ನು ಮುಂದೆ ಮಾಡಿ, ವಿನೋದನನ್ನು ಅನುಲಕ್ಷಿಸಿ ಅದೇ ಉಚ

ಸ್ವರದಲ್ಲಿ ಮಾತನಾಡಿದ: "ಬಾರೋ ದೈವಗೇಡಿ, ಬಾ ಈ ಕಡೆ; ನನ್ನ ಕಾಲು ಮುಟ್ಟಿ 'ನಮ್ಮಣ್ಣ ಮೋಸಗಾರ' ಎಂದು ಹೇಳು—ಈ ಕ್ಷಣವೇ ಎಲ್ಲವನ್ನೂ ನಿನಗೆ ಬಿಟ್ಟುಕೊಡದಿದ್ದರೆ ನಾ ವೈಕುಂಠ ಮಜುಮದಾರರ ಮಗನಲ್ಲ!"

ನಿಮಾಯಿ ಬೆದರಿದ: "ಹಾಹಾ, ಏನು ನಡೆಸಿದ್ದೀ ತಮ್ಮಾ! ಮಾಡಿ ಕೊಳ್ಳಲಿ ಅವರು ದಾವೆ! ಏನಾಗುವುದು ಅಲ್ಲಿ ಆಗಲಿ. ಈ ಆಣೆ ಚೂರಿ ಏತಕ್ಕೆ? ನಡೆ ನಡೆ, ಒಳಗೆ ನಡೆ," ಎಂದು ಅಳಿಯನ ಕೈಹಿಡಿದು ಜಗ್ಗ ತೊಡಗಿದ.

ವಿನೋದ ಮಾತ್ರ ಮೇಲಕ್ಕೆ ನೋಡಲಿಲ್ಲ; ಒಂದು ಮಾತಿಗೂ ಉತ್ತರ ಕೊಡಲಿಲ್ಲ. ನೀರವವಾಗಿ ಕುಳಿತುಬಿಟ್ಟ.

ಗೋಕುಲ ಬಲವಾಗಿ ಕೈ ಕೊಸರಿಕೊಂಡು "ಊಂ ಹೂ, ಇಲ್ಲಿಂದ ಒಂದು ಹೆಜ್ಜೆಯೂ ಸರಿಯುವುದಿಲ್ಲ!" ಎಂದು ಮೇಲ್ಗಡೆ ನೋಡುತ್ತ ಮಾತ ನಾಡತೊಡಗಿದ: "ಅಕೋ ಅಪ್ಪ ಕೇಳುತ್ತಿದ್ದಾನೆ.—ಆತ ಸಾಯುವ ಮುಂದೆ, 'ಗೋಕುಲ, ಆಸ್ತಿ ನಿಮ್ಮಿಬ್ಬರದೂ ಅಣ್ಣತಮ್ಮಂದಿರದು; ವಿನೋದ ಸನ್ಮಾರ್ಗಕ್ಕೆ ಹತ್ತಿದಾಗ ಅವನ ಪಾಲಿನದು ಅವನಿಗೆ ಕೊಡು,' ಎಂದು ಹೇಳಿದ್ದಾನೆ. ಆ ಸಂಪತ್ತಿಯನ್ನು ನಾ ಯಕ್ಷನಂತೆ ರಕ್ಷಿಸುತ್ತಿರುವೆನೆಂಬುದನ್ನು ಅಪ್ಪ ನೋಡುತ್ತಿದ್ದಾನೆ. ಅವನು ಯಾವಾಗ ನೆಟ್ಟಗಾದಾನ, ಯಾವಾಗ ಮನೆಗೆ ಬಂದಾನು ಎಂದೇ ದೇವರಲ್ಲಿ ಮೊರೆಯಿಡುತ್ತಿದ್ದೇನೆ. ಮತ್ತಿವನೆನ್ನು ತ್ತಾನೆ, ನಾ ಮೋಸಗಾರನಂತೆ! ಬಾರೋ ದೈವಗೇಡಿ, ಮುಂದಕ್ಕೆ ಬಾ, ನನ್ನ ಕಾಲು ಮುಟ್ಟಿ ಇವರಿಗೆಲ್ಲಾ ಹೇಳು: 'ನಿಮ್ಮಣ್ಣ ಮೋಸದಿಂದ ನಿನ್ನ ಸಂಪತ್ತನ್ನು ಎತ್ತಿಹಾಕಿದ' ಎಂದು ಹೇಳು!"

ವಿನೋದನ ಗೆಳೆಯರು ಅವನಿಗೆ ಮುಗಿಬಿದ್ದು ತಳ್ಳ ತೊಡಗಿದರು ಅವನು ಜಪ್ಪೆಂದರೂ ಏಳಲಿಲ್ಲ. ಬನರ್ಜಿ ಮಹಾಶಯರು ಹೋಗಿ ಅವನ ಕೈ

ಹಿಡಿದೆಳೆದು ಎಂದನು: "ಎನ್ನ ವಿನೋದ ಕಾಲು ಮುಟ್ಟಿ, ಏಕೆ ಅಂಜುತ್ತೀ ? ಇಂಥ ಸುಸಂಧಿ ಯಾವಾಗ ಸಿಕ್ಕಬೇಕು ?"

ವಿನೋದ ಎದ್ದು ನಿಂತು ನುಡಿದ: "ಹೌದು, ಇಂಥ ಸುಯೋಗ ಎಂದೂ ಸಿಕ್ಕಲಾರದು" ಎಂದು ಎರಡಡಿ ಮುಂದಿಟ್ಟು ಹೇಳಿದ: "ನಿನ್ನ ಪಾದಮುಟ್ಟಿ ಹೇಳುವೆ ಅಣ್ಣಾ, ನಾ ಮದ್ಯ ಕುಡಿಯಲಿ, ಏನೇ ಕುಡಿಯಲಿ, ನಾ ನಿನ್ನನ್ನು ಅರಿತಿರುವೆ. ನಿನ್ನ ಪಾದ ಮುಟ್ಟಿ ನಿನಗೆ ಮೋಸಗಾರನೆಂದರೆ ನನ್ನ ಕೈಯಿಲ್ಲಿಯೇ ಕತ್ತರಿಸಿಬಿದ್ದೀತು! ನನ್ನ ಬಾಯಿಂದ ಅದು ಬರಲಾರದು. ಆದರೆ ಇದೇ ಸಮಯದಲ್ಲಿ ನಿನ್ನ ಪಾದದಾಣೆಯಾಗಿ ಹೇಳುತ್ತೇನೆ: ನಾನಿನ್ನು ಮದ್ಯವನ್ನೆಂದೂ ಮುಟ್ಟುವುದಿಲ್ಲ! ಅಣ್ಣಾ, ನಿನ್ನ ತಮ್ಮನೆಂದು ಹೇಳಿಕೊಳ್ಳುವುದಕ್ಕೆ ಯೋಗ್ಯನಾಗುವಂತೆ ನನ್ನನ್ನು ಹರಸು. ನಿನ್ನ ಮಾನವನ್ನು ಕಾಯುತ್ತ ನಿನ್ನ ಚರಣತಲದಲ್ಲಿಯೇ ಕೊನೆತನಕ ಇರುವಂತೆ ಅನುಗ್ರಹಿಸು."

ಎಂದು ವಿನೋದ ಅಣ್ಣನ ಪಾದದ ಮೇಲೆ ತಲೆಯಿಟ್ಟು ಬಿದ್ದುಬಿಟ್ಟ.



# ಏಕಾದಶಿ ಬೈರಾಗಿ

ಕಾಲೀದಹ ಗ್ರಾಮ ಬ್ರಾಹ್ಮಣ ಪ್ರಧಾನ ಹಳ್ಳಿ. ಗೋಪಾಲ ಮುಖ್ಯೋಪಾಧ್ಯಾಯರ ಮಗ ಅಪೂರ್ವ ಚಿಕ್ಕಂದಿನಲ್ಲಿಯೇ ಹುಡುಗರ ಹಿರಿಹುದ್ದರಿಯಾಗಿದ್ದ. ಐದಾರು ವರುಷ ಕಲಕತ್ತೆಯ ಮೆಸ್ಸಿನಲ್ಲಿದ್ದು ಬಿ. ಎ. (ಆನರ್ಸ) ಆಗಿ ಬಂದ ಮೇಲಂತೂ ಊರೊಳಗೆ ಅವನ ಪ್ರಭಾಪ-ಪ್ರತಿಷ್ಠೆ ಮಿತಿಮೀರಿ ಬೆಳೆಯಿತು. ಊರಲ್ಲೊಂದು ಜೀರ್ಣಶೀರ್ಣ ಹಾಯ್‌ಸ್ಕೂಲಿತ್ತು. ಅವನ ಓರಗೆಯವರು ಇಪ್ಪರೊಳಗೆ ಅಲ್ಲಿಯೇ ಕಲಿಯುವುದು ಮುಗಿಸಿ, ಸಂಧ್ಯಾ-ಪೂಜಾ ಬಿಟ್ಟು, ಹತ್ತಾಣೆ ಆರಾಣೆ ಕೂದಲು ಕತ್ತರಿಸಿಕೊಂಡಿದ್ದರು. ಆದರೆ ಕಲಕತ್ತೆಯಿಂದ ಬಂದ ಈ ಗ್ರ್ಯಾಜುಯೇಟನ ತಲೆಗೂದಲು ಸಪಾಟಾಗಿ ನಡುವೆ ಭವ್ಯವಾದ ಚಂಡಿಕೆಯಿರುವುದನ್ನು ಕಂಡು, ಬರೀ ಹುಡುಗರೇಕೆ, ಹಿರಿಯರು ಕೂಡ ಸೋಜಿಗಗೊಂಡರು. ನಗರದ ಸಭೆ ಸಮಿತಿಗಳಲ್ಲಿ ಜ್ಞಾನಿಗಳ ಉಪನ್ಯಾಸ ಕೇಳಿ, ಸನಾತನ ಹಿಂದು ಧರ್ಮದ ಅನೇಕ ನಿಗೂಢ ರಹಸ್ಯಗಳನ್ನರಿತುಕೊಂಡು ಊರಿಗೆ ಬಂದಿದ್ದ ಅಪೂರ್ವ. 'ಈ ಹಿಂದೂ ಧರ್ಮದಂತಹ ಸನಾತನ ಧರ್ಮ ಮತ್ತೊಂದಿಲ್ಲ; ಏಕೆಂದರೆ ಇದರ ಪ್ರತಿಯೊಂದು ವಿಧಿಯೂ ವಿಜ್ಞಾನಸಮ್ಮತ' ಎಂದು ತನ್ನ ಸಂಗಡಿಗರಲ್ಲಿ ಪ್ರಚಾರ ಮಾತ ತೊಡಗಿದ. ಚಂಡಿಕೆಯ ವೈದ್ಯುತಿಕ ಪ್ರಯೋಜನ, ದೇಹ ರಕ್ಷಣೆಯ ದೃಷ್ಟಿಯಿಂದ ಸಂಧ್ಯಾಹ್ನಿಕಗಳ ಉಪಯೋಗ, ಕಚ್ಚಾ ಬಾಳೆಯ ಭಕ್ಷಣೆಯ ರಾಸಾಯನಿಕ ಪ್ರತಿಕ್ರಿಯೆ ಮೊದಲಾದ ಅಪರಿಜ್ಞಾತ ತತ್ತ್ವಗಳ ವ್ಯಾಖ್ಯೆಯನ್ನು ಕೇಳಿ ಹುಡುಗರು ಮುದುಕರೆಲ್ಲಾ ಬೆರಗಾದರು. ಇದರ ಫಲವಾಗಿ, ಕೆಲ ದಿನಗಳಲ್ಲಿಯೇ ಹುಡುಗರು ಚಂಡಿಕೆ ಬಿಟ್ಟು, ಸಂಧ್ಯಾಹ್ನಿಕ ಆರಂಭಿಸಿ, ಏಕಾದಶಿ ಅಮಾವಾಸ್ಯೆ ಗಂಗಾಸ್ನಾನಾದಿ ವ್ರತ ನಿಯಮ ಹಿಡಿದು ಮನೆಯ ಹೆಂಗುಸಗನ್ನೂ ಹಿಂದೆ ಹಾಕಿದರು. ಯುವಕರ ಗುಂಪಿನಲ್ಲಿ ಹಿಂದುಧರ್ಮದ

ಪುನರುದ್ಧಾರ, ನೇಶೋದ್ಧಾರ ಮೊದಲಾದವುಗಳ ಕಲ್ಪನೆ-ಬಡಬಡಿಕೆಗಳ ಗಲಭೆಯೆದ್ದಿತು.

ಮುದುಕರು 'ನೋಡಿರಿ ಗೋಪಾಲ ಮುಖರ್ಜಿಯವರ ಸುದೈವ! ಶ್ರೀ ಕಮಲಾಂಬೆಯ ಸುದೃಷ್ಟಿಯಿಂದ ತಕ್ಕ ಮಗ ಹುಟ್ಟಿದ್ದಾನೆ! ಇಲ್ಲದಿದ್ದರೆ, ಈಗಿನ ಕಾಲದಲ್ಲಿ ಇಷ್ಟು ಇಂಗ್ಲಿಷ್ ಕಲಿತೂ ಈ ವಯಸ್ಸಿನೊಳಗೆ ಧರ್ಮದಲ್ಲಿ ಇಷ್ಟೊಂದು ಮತಿ, ಇಷ್ಟೊಂದು ಗತಿ ಯಾರಿಗುಂಟಾಗುತ್ತದೆ!' ಎನ್ನುತ್ತಿದ್ದರು. ನಿಜವಾಗಿಯೂ ಅಪೂರ್ವ ದೇಶದಲ್ಲಿ ಅಪೂರ್ವ ವಸ್ತುವಾದ. ಅವನ ಹಿಂದೂ ಧರ್ಮ ಪ್ರಚಾರಿಣೀ ಸಭೆ, ಧೂಮಪಾನ ನಿವಾರಿಣೀ ಸಭೆ, ದುರ್ನೀತಿದಲನೀ ಸಭೆಗಳ ದಾಳಿಗೆ ಊರಿನ ರೈತರು ರಾಣಿಯರು ಕೂಡ ಬೇಸತ್ತರು. ಪಾಂಚ ಕಡಿ ತೇಓರನು ಸೆರೆ ಕುಡಿದು ತನ್ನ ಹೆಂಡತಿಯನ್ನು ಹೊಡೆದ ಸುದ್ದಿ ಕೇಳಿ ಅಪೂರ್ವ ಸೇನೆ ಸಹಿತ ಹೋಗಿ ಪಾಂಚಕಡಿಗೆ ಶಾಸನ ಮಾಡಿದ: ಮರು ದಿನವೇ ಅವನ ಹೆಂಡತಿ ಗಂಡನೊಡನೆ ತವರುಮನೆಗೆ ಓಡಿ ಹೋದಳು! ಕಾವರಾನು ಮೀನು ಹಿಡಿದುಕೊಂಡು ಅಪರಾತ್ರಿಯಲ್ಲಿ ಮನೆಗೆ ಹೊರಟಾಗ 'ವಿದ್ಯಾಸುಂದರಿ' ನಾಟಕದ ಮಾಲಿನಿಯದೋ ಯಾವುದೋ ಹಾಡನ್ನು ಹಾಡುತ್ತ ಹೊರಟಿದ್ದ, ಬ್ರಾಹ್ಮಣರ ಕೇರಿಯ ಅವಿನಾಶ ಕೇಳಿದ, ತೀರಿತು, ಅವನ ಮೂಗಿನಿಂದ ರಕ್ತ ಹೊರಬೀಳಿಸಿಯೇ ಕೈಬಿಟ್ಟ! ದುರ್ಗಾ ಡೋಮನ ೧೪-೧೫ ವರುಷದ ಹುಡುಗ ಬೀಡಿ ಸೇದುತ್ತ ಹೊಲಕ್ಕೆ ಹೋಗುತ್ತಿದ್ದ; ಅಪೂರ್ವನ ದಳದ ಹುಡುಗರು ಅದನ್ನು ಕಂಡು ಅದೇ ಬೀಡಿಯ ಕೆಂಡವನ್ನು ಅವನ ಬೆನ್ನಮೇಲೆ ಒತ್ತಿಟ್ಟು ಗುಳ್ಳೆಯೆಬ್ಬಿಸಿದರು!

ಊರಿನ ಮಾನಸಿಕ ಉನ್ನತಿಯ ಕಡೆಗೆ ಅಪೂರ್ವನ ದೃಷ್ಟಿ ಹರಿಯಿತು. ಇಸ್ಕೂಲಿನ ಲೈಬ್ರರಿಯಲ್ಲಿ ಶಶಿಭೂಷಣರ ಒಂದೂವರೆ ನಕ್ಷೆಗಳು, ಬಂಕಿಮರ ಎರಡೂವರೆ ಕಾದಂಬರಿಗಳು ವಿನಾ ಏನೂ ಇಲ್ಲವೆಂದು ಕಂಡುಬಂದಿತು. ಈ ದೀನಾವಸ್ಥೆಗಾಗಿ ಹೆಡ್‌ಮಾಸ್ತರರಿಗೆ ಚೆನ್ನಾಗಿ ಅಂದು ಆಡಿ, ಕೊನೆಗೆ

ಲೈಬ್ರರಿಯ ಸಂಘಟನೆಗಾಗಿ ಅಪೂರ್ವ ತಾನೇ ಟೊಂಕಕಟ್ಟಿದ. ಅವನ ಅಧ್ಯಕ್ಷತೆಯಲ್ಲಿ ಚಂದಾಪಟ್ಟಿ, ನಿಯಮಾವಳಿ, ಪುಸ್ತಕಗಳ ಪಟ್ಟಿ ಸಿದ್ಧವಾಗುವುದಕ್ಕೆ ತಡವಾಗಲಿಲ್ಲ. ಊರ ಜನ ಹುಡುಗರ ಧರ್ಮಪ್ರಚಾರದ ಉತ್ಸಾಹವನ್ನು ಹೇಗೂ ಸಹಿಸಿಕೊಂಡರು. ಆದರೆ ಚಂದಾದ ಸೂಲಿಯ ಉತ್ಸಾಹ ಎರಡೇ ದಿನಗಳಲ್ಲಿ ಅಸಹ್ಯವಾಯಿತು. ಕಂಕುಳಲ್ಲಿ ಹೊತ್ತಗೆ ಹಿಡಿದು ಬರುವ ಹುಡುಗರನ್ನು ಕಂಡರಾಯಿತು, ಮನೆಯ ಬಾಗಿಲು ಕಿಡಿಕಿಗಳನ್ನು ಮುಚ್ಚಿಕೊಳ್ಳತೊಡಗಿದರು. ಊರಲ್ಲಿ ಧರ್ಮಪ್ರಚಾರಕ್ಕೆ, ದುರ್ನೀತಿ ದಲನಕ್ಕೆ ಎಷ್ಟೊಂದು ವಿಶಾಲ ಮಾರ್ಗ ಸಿಕ್ಕಿತ್ತು, ಲಾಯಬ್ರರಿಗಾಗಿ ಹಣ ಕೂಡಿಸುವ ಮಾರ್ಗ ಅದರ ಒಂದು ನೂರನೆಯ ಅಂಶದಷ್ಟೂ ಪ್ರಶಸ್ತವಾಗಿಲ್ಲವೆಂಬುದು ಮನವರಿಕೆಯಾಯಿತು. ಅಪೂರ್ವ ಏನು ಮಾಡಬೇಕೆಂದು ಚಿಂತಾಗ್ರಸ್ತನಾದಾಗ ಪಕ್ಕನೆ ಒಂದೊಳ್ಳೆಯ ದಾರಿ ಕಾಣಿಸಿತು. ಸಾಲೆಯ ಹತ್ತಿರವಿದ್ದ ಬೀಳಲಾದ ಹಾಳು ಮನೆಯಮೇಲೆ ಅಕಸ್ಮಾತ್ ಅವನ ಕಣ್ಣು ಬಿದ್ದಿತು. ಅದು ಏಕಾದಶೀ ಬೈರಾಗಿಯದಂತೆ. ವಿಚಾರಣೆ ನಡೆಸಲಾಗಿ ಯಾವುದೋ ಸಾಮಾಜಿಕ ಮಹಾಪರಾಧಕ್ಕಾಗಿ ಊರ ಬ್ರಾಹ್ಮಣರು, ಅವನಿಗೆ ಸಾಮಾನು ಸಟ್ಟು, ಅಗಸರು-ಕೆಲಸಿಗರು ಸಿಗದಂತೆ ಮಾಡಿ ಹತ್ತು ಹನ್ನೆರಡು ವರ್ಷಗಳ ಹಿಂದೆ ಓಡಿಸಿದರೆಂದೂ ಈಗವನು ಬಾರುಯಿಪುರದಲ್ಲಿರುವನೆಂದೂ ದುಡ್ಡುಳ್ಳವನೆಂದೂ ಆದರೆ ಅವನ ಹಿಂದಿನ ಹೆಸರೇನೆಂಬುದು ಯಾರಿಗೂ ಗೊತ್ತಿಲ್ಲ—ಗುಟ್ಟು ರಟ್ಟಾಗುವುದೆಂಬ ಭಯದಿಂದ ಬಹಳ ದಿನ ಬಳಕೆ ಬಿಟ್ಟುದರಿಂದ ಜನರ ಸ್ಮೃತಿಯಿಂದ ಪೂರಾ ಲುಪ್ತವಾಗಿ ಬಿಟ್ಟಿದೆ ಅಂದಿನಿಂದ ಆ ಬೈರಾಗಿ ಮಹಾಶಯ ಏಕಾದಶಿ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆಂದೂ ತಿಳಿಯಿತು. ಅಪೂರ್ವ ಚಪ್ಪಾಳೆ ಹೊಡೆದು ಹೇಳಿದ: “ದುಡ್ಡುಳ್ಳವ! ಸಾಮಾಜಿಕ ಅನಾಚಾರ! ಎಂದಮೇಲೆ ಆ ಮಗನೇ ಲಾಯಬ್ರರಿಯ ಅರ್ಧದಷ್ಟು ಭಾರ ವಹಿಸಬೇಕು! ಇಲ್ಲದಿದ್ದರೆ, ಅಲ್ಲಿಯೂ ಅವನಿಗೆ ಸಾಮಾನು ಸುಟ್ಟು, ಅಗಸ-ಕೆಲಸಿಗರು ಸಿಗಲಾರರು! ಬಾರುಯಿಪುರದ ಜಮೀನದಾರರು ನಮ್ಮಕ್ಕನ ಮಾವನ ಕಡೆಯ ನೆಂಟ!”

ಹುಡುಗರು ಹುರುಪಾದರು. ಕಾಣಿಕೆಯ ಪಟ್ಟಿಯಲ್ಲಿ ಬೈರಾಗಿಯ ಹೆಸರಿನ ಮುಂದೆ ದೊಡ್ಡ ಅಂಕೆ ಬಿತ್ತು. ಏಕಾದಶಿಯಿಂದ ಹಣ ಎತ್ತಲಾಗುವುದು, ಕೊಡದಿದ್ದರೆ ಅಪೂರ್ವ ತನ್ನಕ್ಕನ ಮಾವನ ಕಡೆಯ ನೆಂಟನಿಗೆ ಹೇಳಿ ಅವನಿಗೆ ಆ ಊರಲ್ಲಿಯೂ ಎದ್ದಲಗಾಟಕೊಡಿಸುವನೆಂಬುದನ್ನು ಕೇಳಿ, ರಸಿಕ ಸ್ಮೃತಿರತ್ನ ಲಾಯಬ್ರರಿಯ ಮಂಗಲ ಕಾಮನೆಯಿಂದ, “ ದೊಡ್ಡದೊಂದು ಕಾಣಿಕೆ ಕೊಡದಿದ್ದರೆ ಮಗ ಕಾಲೀದಹದಲ್ಲಿ ಮನೆ ಹೇಗೆ ಉಳಿಸಿಕೊಳ್ಳುತ್ತಾನೋ ನೋಡುತ್ತೇನೆ” ಎಂದ. ಏಕೆಂದರೆ ಅಲ್ಲಿ ತಾನು ವಾಸಿಸದಿದ್ದರೂ ಏಕಾದಶಿಗೆ ಮನೆಯ ಮೇಲೆ ಬಹಳ ಮಮತೆಯೆಂಬುದು ಸ್ಮೃತಿರತ್ನನಿಗೆ ಅರಿಯದುದಲ್ಲ. ಎರಡು ವರ್ಷಗಳ ಹಿಂದೆ ಆ ಜಾಗೆಯನ್ನು ಕೊಂಡು ತನ್ನ ತೋಟಕ್ಕೆ ಸೇರಿಸಿಕೊಳ್ಳಬೇಕೆಂದು ಹವಣಿಸಿ ಅವನು ಹತಾಶನಾಗಿದ್ದ.— ಕಿವಿಗಳಲ್ಲಿ ಬೆರಳಿಟ್ಟುಕೊಂಡು ಏಕಾದಶಿ, ‘ ಛೆಛೆ, ಅದಾಗದು ಸ್ವಾಮಿ, ಹಾಳು ಜಾಗೆ ಕೊಟ್ಟು ಬ್ರಾಹ್ಮಣರಿಂದ ಹಣ ತೆಗೆದುಕೊಳ್ಳಲಾರೆ ’ ಎಂದಿದ್ದ. ಆನಂದ ಪುಲಕಿತನಾಗಿ ಸ್ಮೃತಿರತ್ನ ಅವನ ಬ್ರಾಹ್ಮಣ ಭಕ್ತಿಯನ್ನು ಕೊಂಡಾಡಿ ಡಾಡಿ ಹರಸಿದುದಕ್ಕೆ--“ ಆದರೆ ನನ್ನ ದೈವವೇ ಕೆಟ್ಟದು, ಸ್ವಾಮಿ, ಏಳುತಲೆಯಿಂದ ನಡೆದು ಬಂದ ಮನೆಯನ್ನು ಬಿಟ್ಟುಕೊಡಲು ನನಗೆ ಸಾಧ್ಯವಿಲ್ಲವಾಗಿದೆ. ಸಾಯುವಾಗ ತಂದೆಯವರು ‘ ತಿನ್ನಲು ಕೂಳಿಲ್ಲದಿದ್ದರೂ ಮನೆ ಮಾರು ಕಳೆದುಕೊಳ್ಳಬೇಡ ’ ಎಂದು ಆಣೆಯಿಟ್ಟಿದ್ದಾರೆ” ಎಂದಿದ್ದ.— ಇದನ್ನೆಲ್ಲ ಸ್ಮೃತಿರತ್ನ ಮರೆತಿರಲಿಲ್ಲ.

ಒಂದಿನ ಹುಡುಗರ ದಳ ಎರಡು ಹರದಾರಿ ನಡೆದು ಏಕಾದಶಿಯ ಮನೆಗೆ ಹೋಯಿತು. ಮನೆ ಮಣ್ಣಿನದೇ; ಆದರೆ ಚೊಕ್ಕ-ಜಳಜಳ. ನೋಡಿದರೇ ಲಕ್ಷ್ಮೀಸ್ಥಾನ ಎನಿಸುವಂತಿತ್ತು. ಅಪೂರ್ವ ಅಥವಾ ಅವನ ದಳದವರು ಯಾರೂ ಏಕಾದಶಿಯನ್ನು ಮುಂಚೆಂದೂ ನೋಡಿರಲಿಲ್ಲ. ಆದುದರಿಂದ ಚಂಡೀಮಂಡಪದಲ್ಲಿ ಕಾಲಿಡುತ್ತಲೇ ಅವರ ಮನಸು ವಿರಸಗೊಂಡಿತು.

'ಮನುಷ್ಯ ಹಣದ ಮೊಸಳೆಯಿರಬಹುದು, ಮೀನಿರಬಹುದು. ಲಾಯಬ್ರರಿಗೆ ಇವನಿಂದ ಕವಡೆಯ ಪ್ರಯೋಜನವೂ ಖಂಡಿತ ಆಗದು' ಎಂದವರಿಗೆನಿಸಿತು. ಏಕಾದಶಿಯ ಉದ್ಯೋಗ ಸಾವುಕಾರಿಕೆ. ವಯಸ್ಸು ಅರುವತ್ತಕ್ಕೆ ಮಿಕ್ಕಿದೆ. ಅವನ ಮೈ ಬಡಕಲಿದ್ದಷ್ಟೇ ಒಣಕಲು. ಕೊರಳ ತುಂಬ ತುಳಸೀ ಮಾಲೆ. ಗಡ್ಡಮೀಸೆಗಳು ಚೊಕ್ಕಟವಾಗಿದ್ದವು. ಮುಖನೋಡಿದರೆ ಇವನಲ್ಲಿ ಎಳ್ಳಷ್ಟಾದರೂ ಕೋಮಲತೆ ಇದ್ದಂತೆನಿಸುತ್ತಿರಲಿಲ್ಲ. ಗಾಣದ ಬಾಯಿಗೆ ಸಿಕ್ಕ ಕಬ್ಬು ತನ್ನ ರಸವನ್ನೆಲ್ಲ ತೊರೆದು, ಕೊನೆಗೆ ತಾನೇ ಉರುವಲಾಗಿ ಅದನ್ನು ಅಟ್ಟಿಸುತ್ತದಲ್ಲ, ಹಾಗೆಯೇ ಇವನು ಮನುಷ್ಯರನ್ನು ಹಿಂಡಿ ಒಣಗಿಸುವುದಕ್ಕಾಗಿಯೇ ತನ್ನ ಮನುಷ್ಯತ್ವವನ್ನೆಲ್ಲ ಹಿಂಡಿ ಒಗೆಯಲು 'ಮಹಾಜನ'ನಾಗಿ* ಕುಳಿತಿರಬೇಕು. ಅವನ ಮುಖಚರ್ಯೆ ನೋಡಿದ ಮಾತ್ರಕ್ಕೇ ಅಪೂರ್ವ ತಣ್ಣಗಾದ. ಚಂಡೀಮಂಡಪದಲ್ಲಿ ಸಾದಾ ಜಮಖಾನೆ ಹಾಸಿದೆ. ನಡುವೆ ಏಕಾದಶಿ ಕುಳಿತಿದ್ದಾನೆ. ಅವನೆದುರಿಗೆ ಒಂದು ಕಟ್ಟಿಗೆಯ ಕೈಪೆಟ್ಟಿಗೆ, ಪಕ್ಕದಲ್ಲಿ ಲೆಕ್ಕದ ಪುಸ್ತಗಳ ಒಟ್ಟಿಲು. ಇಳಿವಯಸ್ಸಿನ ಕರಣಿಕನೊಬ್ಬ ಜನಿವಾರ ಕೊರಳಿಗೆ ಸುತ್ತಿಕೊಂಡು ಬರಿಮೈಯಿಂದ ಪಾಟಿಯ ಮೇಲೆ ಬಡ್ಡಿಲೆಕ್ಕ ಮಾಡುತ್ತಲಿದ್ದ. ಎದುರಿಗೆ, ಅಕ್ಕಪಕ್ಕದಲ್ಲಿ, ಪಡಸಾಲೆಯಲ್ಲಿ, ಕಂಬಗಳ ಮರೆಯಲ್ಲಿ ಬೇರೆ ಬೇರೆ ವಯಸ್ಸಿನ, ಬೇರೆ ಬೇರೆ ಅವಸ್ಥೆಯ ಗಂಡುಸರು ಹೆಂಗುಸರು ಮೋರೆ ಸಪ್ಪಗೆ ಮಾಡಿಕೊಂಡು ಕುಳಿತಿದ್ದರು. ಯಾರು ಸಾಲ ಬೇಡಲಿಕ್ಕೆ, ಯಾರು ಸಮಯ ಕೇಳಿಕೊಳ್ಳಲಿಕ್ಕೆ, ಯಾರು ಬಡ್ಡಿ ತೆರಲಿಕ್ಕೆ ಬಂದಿದ್ದರು. ಸಾಲ ತೀರಿಸಲಿಕ್ಕೆ ಬಂದಿರುವಂತೆ ಯಾರ ಮುಖಲಕ್ಷಣವೂ ಇರಲಿಲ್ಲ.

ಅಕಸ್ಮಾತ್ತಾಗಿ ಹಲವು ಜನ ಸುಸಂಸ್ಕೃತ ಯುವಕರು ಬಂದುದಕ್ಕೆ ಏಕಾದಶಿ ವಿಸ್ಮಯದಿಂದ ನೋಡಿದ. "ಯಾವೂರವರು ?" ಪಾಟಿ ಕೆಳಗಿಟ್ಟು ಕರಣಿಕ ಕೇಳಿದ.

* ಮಹಾಜನ=ಸಾವುಕಾರ.

" ಕಾಲೀದಹದವರು. "

" ಯಾವ ಜಾತಿ ಮಹಾಶಯ ?"

" ನಾವೆಲ್ಲರೂ ಬ್ರಾಹ್ಮಣರು."

ಏಕಾದಶಿ ಗೌರವಪೂರ್ವಕವಾಗಿ ಎದ್ದು ತಲೆವಾಗಿ ನಮಸ್ಕರಿಸಿದ. " ಕೂತುಕೊಳ್ಳಲು ಅಪ್ಪಣೆಯಾಗಲಿ" ಎಂದ. ಎಲ್ಲರೂ ಕುಳಿತ ಬಳಿಕ ಏಕಾದಶಿ ಕುಳಿತ. ಕರಣಿಕ ಪ್ರಶ್ನಿಸಿದ: " ಏನು ಕೆಲಸವಿತ್ತು ?"

ಅಪೂರ್ವ ಲಾಯಬ್ರರಿಯ ಉಪಯುಕ್ತತೆಯ ಬಗ್ಗೆ ಪ್ರಸ್ತಾವನೆ ಹೇಳಿ, ವರ್ಗಣಿಯ ಮಾತೆತ್ತಿದಾಗ ಏಕಾದಶಿಯ ಮುಖ ಬೇರೆ ಕಡೆ ತಿರುಗಿಕೊಂಡಿತ್ತು. ಕಂಬದ ಮರೆಗೆ ಕುಳಿತಿದ್ದ ಹೆಣ್ಣುಮಗಳೊಡನೆ ಮಾತನಾಡುತ್ತಿದ್ದ " ಸೀ ಏನಿಟ್ಟಿದ್ದೀ ಹಾರುನ ತಾಯಿ ? ಬಡ್ಡಿ ಆಗಿದೆ, ಒಟ್ಟು ಏಳು ರೂಪಾಯಿ ಎರಡಾಣೆ. ಅದರಲ್ಲಿ ಎರಡಾಣೆ ಬಿಡಿಸಿಕೊಳ್ಳುವುದೆಂದರೆ—ಅದಕ್ಕಿಂತ ನನ್ನ ಕತ್ತು ಮೆಟ್ಟಿ ಕೊಂದು ಬಿಡಬಾರದೇ ?"

ಇದರ ಮೇಲೆ ಇಬ್ಬರಿಗೂ ದೊಡ್ಡ ಹಾಕಿಯಾಟವೇ ಆಯಿತು—ಆ ಎರಡಾಣೆಯನ್ನೇ ಅವರ ಇಡೀ ಜೀವನ ಅವಲಂಬಿಸಿತ್ತೋ ಏನೋ! ಹಾರುನ ತಾಯಿ ಕೇಳದವ್ಳು, ಏಕಾದಶಿ ಬಿಡದಪ್ಪ! ಹೊತ್ತಾಗುತ್ತದೆಂದು ಅಪೂರ್ವ ಆ ವಾಗ್ಯುದ್ಧದ ನಡುವೆಯೇ ಕೇಳಿದ " ನಮ್ಮ ಲಾಯಬ್ರರಿಯ—"

ಏಕಾದಶಿ ಮುಖ ತಿರುಗಿಸಿ ಎಂದ: " ಹಾಂ ಮಹಾಶಯ, ಈಗ ಕೇಳಿ ಕೊಳ್ಳುತ್ತೇನೆ—ಏನೋ ನಫರ. ನೀನೂ ನಮ್ಮ ಕುತ್ತಿಗೆಯ ಮೇಲೆ ಕಾಲಿಡ ಬೇಕೆನ್ನುವೆಯಾ ? ಹಿಂದಿನ ಎರಡು ರೂಪಾಯಿ ಕೊಟ್ಟಿಲ್ಲ, ಮತ್ತೊಂದು ರೂಪಾಯಿ ಬೇಡಲಿಕ್ಕೆ ನಾಚಿಕೆ ಬರುವುದಿಲ್ಲವೆ ? ಬಡ್ಡಿಗಿಡ್ಡಿ ಏನಾದರೂ ತಂದಿದ್ದೀಯಾ ?"

ನಫರ ಒಲ್ಲಿಯ ಚುಂಗಿನಿಂದ ಒಂದಾಣೆ ತೆಗೆದುಕೊಡುತ್ತಲೇ ಏಕಾದಶಿಯ ಕಣ್ಣು ಕೆಂಪಾದವು " ಮೂರು ತಿಂಗಳಾಗಲಿಲ್ಲವೇನೆಲೆ ? ಇನ್ನೆರಡು ಬಿಲ್ಲಿ ಎಲ್ಲಿವೆ ತೆಗೆ !" ಎಂದ.

ನಫರ ಕೈಜೋಡಿಸಿ ಹೇಳಿದ: "ಇಲ್ಲ ಧನಿಯರೆ, ಇದನ್ನೂ ಎರಡನೆ ಯುವರ ಕೈಕಾಲು ಹಿಡಿದು ಕೈಗಡ ತಂದಿದ್ದೇನೆ. ಇನ್ನೆರಡು ಬಿಲ್ಲಿ ಮುಂದಿನ ಸಾರೆ ಕೊಡುತ್ತೇನೆ."

"ತೆಗೆ, ಆಕಡೆಯ ಚುಂಗು!"

ಆ ಚುಂಗು ತೆಗೆದು ತೋರಿಸುತ್ತ ನಫರ ನುಡಿದ: "ಎರಡು ಬಿಲ್ಲಿಗಾಗಿ ಸುಳ್ಳು ಹೇಳುತ್ತೇನೆಯೇ ಒಡೆಯಾ? ದುಡ್ಡು ಇಟ್ಟುಕೊಂಡು ನಿಮಗೆ ಮೋಸ ಮಾಡಿದವನ ಬಾಯೊಳಗೆ ಹುಳ ಬೀಳಲಿ!"

ತೀಕ್ಷ್ಣದೃಷ್ಟಿಯಿಂದ ನೋಡುತ್ತ ಏಕಾದಶಿ ಎಂದ: "ನಾಲ್ಕು ಬಿಲ್ಲಿ ಕಡ ತೆಗೆದುಕೊಂಡು ಬಂದೆ, ಇನ್ನೆರಡು ಬಿಲ್ಲಿ ಸಿಗಲಿಲ್ಲವೇ ನಿನಗೆ?"

ನಫರನಿಗೆ ಸಿಟ್ಟೇ ಬಂತು: "ಆಣೆ ಮಾಡಿದೆನಲ್ಲ ಒಡೆಯಾ--ಬಾಯೊಳಗೆ ಹುಳ---"

ಅಪೂರ್ವನ ಮೈ ಉರಿಯ ತೊಡಗಿತು. ಸಹನೆ ಮೀರಿಹೋಗಿ ನುಡಿದ: "ನೀವೊಳ್ಳೆಯ ಜನ ಕಾಣಿಸುತ್ತೀರಿ!"

ಏಕಾದಶಿ ಹೊರಳಿ ನೋಡಿದ ಮಾತ್ರ; ಮಾತನಾಡಲಿಲ್ಲ. ಪರಾಣ ಬಾಗ್ದಿ ಎದುರಿನ ಅಂಗಳದಲ್ಲಿ ಹಾಯ್ದು ಹೋಗುತ್ತಿದ್ದ. ಅವನನ್ನು ಕೈಮಾಡಿ ಕರೆದು ಏಕಾದಶಿ ಹೇಳಿದ: "ಪರಾಣ, ನಫರನ ಒಲ್ಲಿಯನ್ನಷ್ಟು ಶೋಧಿಸಿ ನೋಡು, ಎರಡು ಬಿಲ್ಲಿಗಳನ್ನೇನಾದರೂ ಕಟ್ಟಿಕೊಂಡಿದ್ದಾನೇನೋ!"

ಪರಾಣ ಬರುತ್ತಲೇ ನಫರ ತನ್ನ ಧೋತರ ಚುಂಗಿನಿಂದ ಎರಡುಬಿಲ್ಲಿ ಬಿಚ್ಚಿ ಏಕಾದಶಿಯ ಮುಂದೆ ಎಸೆದ. ಈ ಅಶಿಷ್ಟತೆಗಾಗಿ ಏಕಾದಶಿ ಎಷ್ಟೂ ಕೋಪಿಸಿಕೊಳ್ಳಲಿಲ್ಲ. ಗಂಭೀರ ಮುಖದಿಂದ ಆರು ಬಿಲ್ಲಿ ಪೆಟ್ಟಿಗೆಗೆ ಹಾಕಿ "ಘೋಷಾಲ ಮಹಾಶಯ, ನಫರನ ಹೆಸರಲ್ಲಿ ಬಡ್ಡಿ ಜಮಾ ಕಟ್ಟಿಕೊಳ್ಳಿರಿ. ಅಲ್ಲೋ, ಇನ್ನೊಂದು ರೂಪಾಯಿ ಏಕೆ ಬೇಕು ನಿನಗೆ?" ಎಂದರು.

"ಆಗತ್ಯವಿಲ್ಲದಿದ್ದರೆ ಎಲ್ಲಿ ಕೇಳುತ್ತಿದ್ದೆ ಧನಿಯರೆ?"

"ಎಂಟಾಣೆ ಒಯ್ಯೊಲ್ಲ. ಇಡೀ ರೂಪಾಯಿ ಒಯ್ದ್ರೆ ಯೆಂದರೆ ಹಾಳು ಮಾಡಿಬಿಡುತ್ತೀ."

ಕೊನೆಗೆ ಬಹಳ ತಿಕ್ಕಾಡಿದ ಬಳಿಕ ನಫರ ಹನ್ನೆರಡಾಣೆ ಸಾಲ ಪಡೆದು ಹೊರಟು ಹೋದ.

ಹೊತ್ತೇರತೊಡಗಿತ್ತು. ಅಪೂರ್ವನ ಸಂಗಡಿಗ ಅನಾಥ ಚಂದಾ ಪುಸ್ತಕವನ್ನು ಏಕಾದಶಿಯ ಮುಂದೆ ಒಗೆದು ನುಡಿದ: "ಏನು ಕೊಡುವುದು ಕೊಟ್ಟು ಬಿಡಿರಿ ಮಹಾಶಯ, ನಮಗೆ ತಡವಾಗುತ್ತದೆ."

ಏಕಾದಶಿ ಪುಸ್ತಕವನ್ನೆತ್ತಿ ಸುಮಾರು ಹದಿನೈದು ನಿಮಿಷ ಸಂಪೂರ್ಣವಾಗಿ ಸೂಕ್ಷ್ಮವಾಗಿ ನೋಡಿ, ಕೊನೆಗೆ ಉಸಿರ್ಗರೆದು ಅದನ್ನು ತಿರುಗಿ ಕೊಡುತ್ತ, "ನಾ ಮುದುಕ ಮನುಷ್ಯ, ನನ್ನ ಕಡೆಯಿಂದ ಏಕೆ?" ಎಂದ

ಅಪೂರ್ವ ಸಿಟ್ಟು ಹತ್ತಿಟ್ಟು ನುಡಿದ: "ಮುದುಕರು ಹಣ ಕೊಡದಿದ್ದರೆ ಹುಡುಗರು ಕೊಡುತ್ತಾರೆಯೆ? ಅವರ ಹತ್ತಿರ ಎಲ್ಲಿಂದ ಬರುತ್ತದೆ?"

ಮುದುಕ ಹೇಳಿದ: "ಸಾಲೆ ಹುಟ್ಟಿ ೨೦-೨೫ ವರ್ಷವಾಯಿತು. ಇಷ್ಟು ದಿನ ಯಾರೂ ಲಾಯಬ್ರರಿಯ ಹೆಸರೇ ತೆಗೆದಿಲ್ಲವಲ್ಲ? ಅದು ಹೋಗಲಿ. ಈ ಕೆಲಸವೇನು ಚೆಲೋದೇ—ನಮ್ಮ ಮಕ್ಕಳು ಓದಲಿ ಬಿಡಲಿ, ನಮ್ಮೂರಿನ ಹುಡುಗರಾದರೂ ಓದುತ್ತಾರಲ್ಲ! ಏನೆನ್ನುತ್ತೀರಿ ಘೋಷಾಲ?" ಘೋಷಾಲ ಗೋಜು ಹಾಗಿ ಏನು ಹೇಳಿದನೋ ತಿಳಿಯದು. ಏಕಾದಶಿಯೆಂದ: "ಒಳ್ಳೆಯದು, ನಾ ಚಂದಾ ಕೊಡುತ್ತೇನೆ. ಒಂದಿನ ಬಂದು ಒಯ್ಯಿರಿ ನಾಲ್ಕಾಣೆ. ಏಕೆ ಘೋಷಾಲ, ಇದಕ್ಕೂ ಕಡಿಮೆಯೆಂದರೆ ಚೆಂದವಲ್ಲ! ಹುಡುಗರು ಅಷ್ಟು ದೂರದಿಂದ ಬಂದಿದ್ದಾರೆ--ಹೆಸರು ವಾಹಿನಿ ಆದದ್ದಕ್ಕಲ್ಲವೆ? ಅನೇಕ ಜನರಿದ್ದಾರೆ. ಅವರ ಕಡೆ ಕೇಳಲಿಕ್ಕೆ ಹೋಗುವುದಿಲ್ಲ! ಹೌದೋ ಅಲ್ಲವೋ?"

ಸಿಟ್ಟಿನಿಂದ ಅನಾಥನ ಬಾಯಿಂದ ಮಾತು ಹೊರಡಲಿಲ್ಲ. ವಿಪಿನನೆಂದ: "ಈ ನಾಲ್ಕಾಣೆಗೆ ನಾವಿಷ್ಟು ದೂರ ಬಂದಿದ್ದೇವೆಯೆ? ಅದೂ ಮತ್ತೊಂದು ದಿನ ಬಂದು ಒಯ್ಯಬೇಕೆ?"

ಏಕಾದಶಿ ಒಂದುತರಹ ಧ್ವನಿಮಾಡುತ್ತ ಗೋಣು ಹಾಕಿಹಾಕಿ ನುಡಿದ: "ನೋಡಿದಿರಲ್ಲ ನನ್ನ ಅವಸ್ಥೆ—ನ್ಯಾಯವಾಗಿ ಬರಬೇಕಾದ ಆರು ಬಿಲ್ಲೆ ಬಡ್ಡಿ ಪಡೆಯುವುದಕ್ಕೆ ಈ ಬಡ್ಡೀಮಕ್ಕಳೊಡನೆ ಎಷ್ಟು ಗುದ್ದಾಡಬೇಕಾಗುತ್ತದೆ! ಇನ್ನು ಈ ವಸ್ತ್ರ ಮಾರಿಯೇ ಚಂದಾಗಿಂದಾ— "

ಸಿಟ್ಟಿನಿಂದ ಅಪೂರ್ವನ ತುಟಿ ಅದುರಿದವು. "ಇಲ್ಲಿಯೂ ಅಗಸನಾವಲಿಗರು ಸಿಗದಂತಾದರೆ ತಿಳಿಯುವುದು. ಮಗ ಮೈಗೆಲ್ಲ ಮಟ್ಟಿ ಬಳಿದುಕೊಂಡು, ಜಾತಿಕೋತಿ ಬಿಟ್ಟು ವೈಷ್ಣವ ಆಗಿದ್ದಾನೆ! ಒಳ್ಳೆಯದು!" ಎಂದ.

ವಿಪಿನ ಎದ್ದು ನಿಂತು ಬೆರಳೆತ್ತಿ ಬಜಾಯಿಸಿದ: "ಬಾರುಯಿಪುರದ ರಾಖಾಲದಾಸ ಬಾಬು ನಮ್ಮ ಸಂಬಂಧಿಕರು. ಗೊತ್ತಿರಲಿ ಬೈರಾಗಿ!"

ಮುದುಕ ಬೈರಾಗಿ ಅಕಲ್ಪಿತ ಪ್ರಕರಣದಿಂದ ಕಕ್ಕಾವಿಕ್ಕಿಯಾದ. ಪರ ಊರಿನ ಈ ಹುಡುಗರ ಕ್ರೋಧದ ಕಾರಣ ಅವನಿಗೆ ತಿಳಿಯಲಿಲ್ಲ. ಅಪೂರ್ವ ಹೇಳಿದ: "ಬಡವರ ನೆತ್ತರು ಹೀರುವುದನ್ನು ಹೊರಗೋಡಿಸಿದರೇ ಬಿಡುತ್ತೀ!"

ನಫರ ಇನ್ನೂ ಕುಳಿತಿದ್ದ. ಅವನು ತನ್ನೆರಡು ಬಿಲ್ಲೆ ಸುಲಿದುಕೊಂಡುದಕ್ಕೆ ಒಳಗೊಳಗೆ ಕುದಿಯುತ್ತಲಿದ್ದ. "ನೀವೇನು ಹೇಳಿದಿರಲ್ಲ, ಅದು ಸತ್ಯ. ಬೈರಾಗಿಯಲ್ಲ, ಪಿಶಾಚಿ! ಕಣ್ಣಾರೆ ನೋಡಿದಿರಲ್ಲ, ನನ್ನಿಂದ ಎರಡು ಬಿಲ್ಲೆ ಹೇಗೆ ಸುಲಿದುಕೊಂಡ!" ಎಂದ.

ಮುದುಕನಿಗೆ ಹೇಗಾಯಿತು, ಎಂದು ಅಲ್ಲಿದ್ದವೆಲ್ಲರೂ ಮನಸಿನೊಳಗೆ ಆನಂದಿಸಿದರು. ಅವರ ಮುಖಭಾವವನ್ನು ಕಂಡು ವಿಪಿನ ಕಣ್ಣುಬಡಿಯುತ್ತ ನುಡಿದ: "ಒಳಗಿನ ವಿಷಯ ನಿಮಗೆ ಗೊತ್ತಿಲ್ಲ; ಅವರೆ ನಮ್ಮೂರ ಜನರು

ಎಲ್ಲಾ ಬಲ್ಲರು. ಏ ಮುದಿಯಾ, ನಮ್ಮೂರೊಳಗೆ ನಿನಗೆ ಏಕೆ ಬಹಿಷ್ಕಾರ ಬಿದ್ದಿತ್ತು, ಬೊಗಳು!"

ಸುದ್ದಿ ಹಳೆಯದು : ಎಲ್ಲರಿಗೂ ಗೊತ್ತು—ಏಕಾದಶಿ ಸದ್ಗೋಪ ಜಾತಿಯವ, ಜಾತ-ವೈಷ್ಣವನಲ್ಲ. ಅವನಿಗೊಬ್ಬ ಮಲತಂಗಿಯಿದ್ದಳು; ಅವಳು ಆಸೆಗೆ ಬಿದ್ದು ಕುಲಕ್ಕೆ ಹೊರತಾಗಿ ಹೋಗಿದ್ದಳು; ಏಕಾದಶಿ ಬಹಳ ಕಷ್ಟಪಟ್ಟು ಹುಡುಕಿ ಕರೆದುಕೊಂಡು ಬಂದ. ಆದರೆ ಈ ಹೇಯ ಆಚರಣೆಗಾಗಿ ಜನ ವಿಸ್ಮಯಗೊಂಡರು, ಅತಿಶಯ ಕ್ರುದ್ಧರಾದರು. ಆದರೂ ಆ ಪರದೇಶಿ ತಂಗಿಯನ್ನು ಬಿಡಲೊಪ್ಪಲಿಲ್ಲ. ಅವಳಿಗೆ ಮತ್ತೊಬ್ಬರಾರೂ ಇರಲಿಲ್ಲ, ಇವನೆ ಆಕೆಯನ್ನು ಎತ್ತಿ ಆಡಿಸಿ ಬೆಳೆಸಿದ್ದ; ಒಳ್ಳೇ ಸಡಗರದಿಂದ ಅವಳ ಮದುವೆ ಮಾಡಿದ್ದ. ಮುಂದೆ ಚಿಕ್ಕವಯಸ್ಸಿನಲ್ಲಿಯೇ ವಿಧವೆಯಾಗಿ ಅವಳು ಅಣ್ಣನ ಮನೆಯಲ್ಲಿಯೇ ಬಂದಿರುತ್ತಿದ್ದಳು. ವಯಸ್ಸಿನ ಮತ್ತು ಮನಸ್ಸಿನ ದೋಷದಿಂದ ಅವಳ ಕಾಲು ಜಾರಿತು. ಅದರಿಂದ ಮುದುಕನಿಗೆ ಬಹಳ ದುಃಖವಾಯಿತು. ಊಟಬಿಟ್ಟು ನಿದ್ದೆಗೆಟ್ಟು ಊರೂರು ತಿರುಗಿ ತಂಗಿಯನ್ನು ಹುಡುಕಿ ಮನೆಗೆ ಕರೆದುಕೊಂಡು ಬಂದಿದ್ದ. ಆಗ ಊರವರ ನಿಷ್ಠುರ ಶಾಸನವನ್ನು ಶಿರಸಾವಹಿಸಿ, ಲಜ್ಜಿತೆಯಾದ ದುಃಖಿತೆಯಾದ ದೈವಗೇಡಿ ತಂಗಿಯನ್ನು ಮನೆಯಿಂದ ತಳ್ಳಿ, ಪ್ರಾಯಶ್ಚಿತ್ತ ತೆಗೆದುಕೊಳ್ಳಲು ಏಕಾದಶಿ ಒಪ್ಪಲಿಲ್ಲ. ಆದುದರಿಂದ ಕಠೋರ ಬಹಿಷ್ಕಾರಕ್ಕೆ ಗುರಿಯಾದ. ಕೊನೆಗೆ ನಿರುಪಾಯನಾಗಿ ವೇಷ ಬದಲಿಸಿ ವೈಷ್ಣವನಾಗಿ ಈ ಬಾರುಯಿಪುರಕ್ಕೆ ಓಡಿ ಬಂದಿದ್ದ.

ಇದು ಎಲ್ಲರಿಗೂ ಗೊತ್ತಿತ್ತು. ಆದರೂ ಈ ಜನರ ಬಾಯಿಂದ ಕೇಳಿದರೆ ಹೇಗೆ ಸ್ವಾರಸ್ಯವಾಗಿರುತ್ತದೆಯೋ ಎಂದು ಜನರು ಕೇಳಲು ಉತ್ಸುಕರಾದರು. ಏಕಾದಶಿ ಮಾತ್ರ ಲಜ್ಜೆಯಿಂದ, ಭಯದಿಂದ ಕುಗ್ಗಿಬಿಟ್ಟ.—ತನಗಾಗಿ ಅಲ್ಲ, ತಂಗಿಗಾಗಿ. ಮೊದಲ ಹರಯದಲ್ಲಾದ ತಪ್ಪಿನಿಂದ ಗೌರಿಯ ಹೃದಯಕ್ಕಾದ ದೊಡ್ಡಗಾಯ ಇನ್ನೂ ಮಾದಿರಲಿಲ್ಲವೆಂಬುದು ಮುದುಕನಿಗೆ ಗೊತ್ತಿತ್ತು.

ಈ ವಿಷಯ ಕಿಂಚಿತ್ತಾದರೂ ಅವಳ ಕಿವಿತನಕ ಹೋದರೆ ಸಾಕು, ಅವಳಾ ವ್ಯಥೆ ಉಲ್ಬಣಗೊಳ್ಳುವುದೆಂದು ಅವನಂಜಿದ. ಅವನ ಮುಖ ಬಣ್ಣಗೆಟ್ಟಿತು. ನಿಸ್ತಬ್ಧವಾಗಿ ನೋಡುತ್ತ ನಿಂತ. ಆ ಸಕರುಣ ದೃಷ್ಟಿಯ ನೀರವಪ್ರಾರ್ಥನೆ ಉಳಿದವರಿಗೆ ಊರಿಗೂ ದೃಗ್ಗೋಚರವಾಗಲಿಲ್ಲ; ಅಪೂರ್ವ ಮಾತ್ರ ಅದನ್ನು ಕಂಡು ವಿಸ್ಮಯದಿಂದ ಅವಾಕ್ಕಾದ.

ವಿಪಿನ ಹೇಳತೊಡಗಿದ: “ ನಾವೇನು ತಿರುಕರೋ, ನಾಲ್ಕು ಕಾಸಿಗಾಗಿ ಈ ಬಿಸಿಲೊಳಗೆ ಎರಡು ಹರದಾರಿ ನಡೆದು ಬರಲಿಕ್ಕೆ? ಅದೂ ಈವೊತ್ತಿಲ್ಲ; ಯಾವ ಆಸಾಮಿಯದಾದರೂ ವಸ್ತ್ರ ಯಾವಾಗ ಮಾರುವುದೋ ಗೊತ್ತು ಹಚ್ಚಿಕೊಂಡು ಮತ್ತೆ ಇನ್ನೊಂದಿನ ಬರಬೇಕು ನಾವು! ಆಗ ಈ ಬಾಬುಗಳ ಕೃಪೆ!....ಜನರ ರಕ್ತ ಹೀರಿ ಬಡ್ಡಿ ತಿನ್ನುತ್ತೀ ಮುದಿಯಾ, ಜಿಗಳಿಗೆ ಜಿಗಳೆ ಹತ್ತುವುದಿಲ್ಲ ಬಲ್ಲೆಯಾ? ಇಲ್ಲಿಯೂ ನಿನ್ನ ಗುಟ್ಟು ಬಯಲಿಗೆಳೆಯದಿದ್ದರೆ ನನ್ನ ಹೆಸರು ವಿಪಿನ ಭಟ್ಟಾಚಾರ್ಯನಲ್ಲ! ಕೀಳು ಜಾತಿಯವನ ಕೈಯೊಳಗೆ ದಂಡ್ಯಾಗಿದೆ, ಎಂತಲೇ ಕಣ್ಣು ನೆತ್ತಿಗೇರಿವೆ! ನಡೆ ಅಪೂರ್ವ, ನಾವು ಹೊಗುವ, ಆಮೇಲೆ ಏನು ಮಾಡುವುದು ನೋಡುವ.” ಎಂದು ವಿಪಿನ ಅಪೂರ್ವನ ಕೈಹಿಡಿದೆಳೆದ.

ಹೊತ್ತು ಹನ್ನೊಂದಾಗಿತ್ತು. ಅಷ್ಟು ಹಾದಿ ನಡೆದು ಬಂದುದಕ್ಕೆ ಅಪೂರ್ವನಿಗೆ ನೀರಡಿಕೆಯಾಗಿತ್ತು. ಅವನು ಆಳಿಗೆ ನೀರು ತರಲು ಹೇಳಿ ಎಷ್ಟೋ ಹೊತ್ತಾಗಿತ್ತು. ಈ ವಾದವಿವಾದದಲ್ಲಿ ಅದನ್ನು ಮರತೇ ಬಿಟ್ಟಿದ್ದ. ಇಪ್ಪತ್ತೇಳಿಪ್ಪತ್ತೆಂಟು ವಯಸ್ಸಿನ ವಿಧವೆ ಪಕ್ಕದ ಬಾಗಿಲು ತೆರೆದುಕೊಂಡು, ಒಂದು ಕೈಯಲ್ಲಿ ನೀರು ಒಂದು ಕೈಯಲ್ಲಿ ಬತ್ತಾಸದ ತಟ್ಟೆ ಹಿಡಿದುಕೊಂಡು ಪ್ರವೇಶಿಸಿದಳು; ತನ್ನ ನೀರಡಿಕೆಯ ನೆನಪು ಆಗ ಅಪೂರ್ವನಿಗಾಯಿತು. ಗೌರಿ ನೋಡಲಿಕ್ಕೆ ಕೀಳು ಜಾತಿಯವಳಂತಿರಲಿಲ್ಲ. ಇನ್ನೂ ಇದೇ ಸ್ನಾನ ಮಾಡಿ, ರೇಶ್ಮೆ ಮಡಿಯುಟ್ಟು ಆಹ್ನಿಕಕ್ಕೆ ಕೂತಿದ್ದಳೋ ಕೂಡ್ರುತ್ತಿದಳೋ,

ಬ್ರಾಹ್ಮಣನಿಗೆ ನೀರಡಿಕೆಯಾಗಿದೆಯೆಂದು ಕೇಳಿ ಆಹ್ನಿಕ ಬದಿಗಿಟ್ಟು ಬಂದಿದ್ದಳು. “ಯಾರಿಗೆ ನೀರು ಬೇಕಾಗಿತ್ತು?” ಎಂದು ಕೇಳಿದಳು.

ವಿಪಿನನೆಂದ: “ರೇಶ್ಮೆ ಮಡಿ ಉಟ್ಟ ಮಾತ್ರಕ್ಕೆ ನಿನ್ನ ಕೈಲಿ ನೀರು ಕುಡಿಯಬೇಕೇ ನಾವು? ಇವಳೇ ಆ ವಿದ್ಯಾಧರಿ, ಅಪೂರ್ವ!”

ಝಣಾರನೆ ಬಿದ್ದಿತು, ಗೌರಿಯ ಕೈಯೊಳಗಿನ ಬತ್ತಾಸದ ತಟ್ಟೆ. ಅವಳ ಆ ಅತ್ಯಂತ ಲಜ್ಜೆ ಅಪೂರ್ವನನ್ನು ನಾಚಿಸಿತು. ಅವನು ಸಿಟ್ಟಿನಿಂದ ವಿಪಿನನಿಗೆ ಮೊಣಕೈ ತಿವಿದು “ಇದೇನು ಮಂಗತನ ನಡೆಸಿದ್ದೀ! ಪ್ರಸಂಗದ ಅರಿವು ಇಲ್ಲವೆ?” ಎಂದ.

ವಿಪಿನ ಹಳ್ಳಿ ಮನುಷ್ಯ—ಕಲಹ ಸಮ್ಮುಖದಲ್ಲಿ ಗಂಡು ಹೆಣ್ಣಿನ ಭೇದವಿಲ್ಲದ ನಿರಪೇಕ್ಷ ವೀರಪುರುಷ! ಅಪೂರ್ವನ ತಿವಿತದಿಂದ ಮತ್ತಷ್ಟು ಕಠೋರನಾದ. ಕೆಂಗಣ್ಣು ಕೆಕ್ಕರಿಸಿ, “ಏಕೆ, ಸುಳ್ಳೇ? ಬ್ರಾಹ್ಮಣರ ಹುಡುಗರಿಗೆ ನೀರು ತರಬೇಕೆಂದರೆ, ಎಂಥ ಸಾಹಸ ಅವಳದು! ನಾ ತುಂಬಿದ ಸಂತೆಯೊಳಗೆ ಗುಟ್ಟು ರಟ್ಟು ಮಾಡಿಬಿಡುವೆ, ಗೊತ್ತೇ?” ಎಂದ.

ಅಪೂರ್ವ ಇನ್ನು ವಾದಿಸಿ ಫಲವಿಲ್ಲವೆಂದು ಕೊಂಡ. “ನಾನೇ ತರಲಿಕ್ಕೆ ಹೇಳಿದ್ದೆ ವಿಪಿನ, ನೀ ತಿಳಿಯದೆ ಸುಮ್ಮನೆ ಜಗಳ ಹೂಡಬೇಡ, ನಡೆ, ನಾವಿನ್ನು ಹೋಗುವ.” ಎಂದ.

ಗೌರಿ ತಟ್ಟೆ ತೆಗೆದುಕೊಂಡು ಯಾರ ಕಡೆಗೂ ನೋಡದೆ ಒಳಗೆ ಹೋಗಿ ಬಾಗಿಲ ಹಿಂದೆ ನಿಂತುಕೊಂಡಳು. “ಅಣ್ಣಾ, ಇವರು ಯಾತರ ಚಂದಾ ಕೇಳಬಂದಿದ್ದರು? ಕೊಟ್ಟೆಯಾ?” ಎಂದು ಅಲ್ಲಿಂದಲೇ ಕೇಳಿದಳು.

ಏಕಾದಶಿ ಇಷ್ಟೊತ್ತು ವಿಹ್ವಲನಾಗಿ ಕುಳಿತಿದ್ದ. ತಂಗಿಯ ಪ್ರಶ್ನೆಗೆಚ್ಚತ್ತು, “ಇಲ್ಲ, ಈಗ ಕೊಡುತ್ತೇನೆ ತಂಗೀ” ಎಂದು ಅಪೂರ್ವನ ಕಡೆಗೆ ನೋಡಿ ಕೈಜೋಡಿಸಿ ನುಡಿದ: “ಬಾಬು ಮಹಾಶಯ, ನಾ ಬಡವ. ನಾಲ್ಕಾಣೆಯೇ ನನಗೆ ಹೆಚ್ಚು, ದಯವಿಟ್ಟು ತೆಗೆದುಕೊಳ್ಳಿರಿ.”

ವಿಪಿನ ಮತ್ತೇನಾದರೂ ಒಗರು ಮಾತಾಡಲು ಹಾತೊರೆದ. ಅಪೂರ್ವ ಸನ್ನೆಯಿಂದ ತಡೆದ. ಆದರೆ ಇಷ್ಟು ಪ್ರಕರಣವಾದ ಮೇಲೂ ಅದೇ ನಾಲ್ಕಾಣೆಯ ಪ್ರಸ್ತಾಪ ಕೇಳಿ ಅವನಿಗೂ ಜುಗುಪ್ಸೆಯಾಯಿತು. "ಇರಲಿ ಬೈರಾಗಿ. ನೀವೇನೂ ಕೊಡುವುದು ಬೇಡ," ಎಂದ.

ಇದು ಸಿಟ್ಟಿನ ಮಾತೆಂದು ಬೈರಾಗಿ ಅರಿತ. ಸಿಟ್ಟು ಸಿರಿಟ್ಟು, "ಕಲಿ ಕಾಲ! ಸಂಧಿ ಸಾಧಿಸಿದರೆ ಯಾರು ಯಾರ ಕೊರಳನ್ನೂ ಕೊಯ್ಯುವರು! ಕೊಡು ಘೋಷಾಲ ಮಹಾಶಯ, ಐದಾಣೆ ಖರ್ಚು ಹಾಕು—ಇನ್ನೇನು ಮಾಡುವುದು!" ಎಂದು ಮತ್ತೊಂದು ನಿಟ್ಟುಸಿರು ಬಿಟ್ಟ.

ಅವನ ಮೋರೆ ನೋಡಿ ಅಪೂರ್ವನಿಗೀಗ ನಗು ಬಂದಿತು. ವ್ಯಾಜಜೀವಿ ಮುದುಕನಿಗೆ ನಾಲ್ಕಾಣೆ ಐದಾಣೆಗಳಲ್ಲಿ ಎಷ್ಟು ಮಹಾಂತರವಿರುವುದೆಂಬುದನ್ನು ಅವನರಿತುಕೊಂಡ. ನಸುನಕ್ಕು, "ಇರಲಿ ಬೈರಾಗಿ, ಏನೂ ಬೇಡ. ನಾಲ್ಕೈದಾಣೆ ಚಂದಾ ನಾವು ತೆಗೆದುಕೊಳ್ಳುವುದಿಲ್ಲ. ಹೋಗುತ್ತೇವೆ." ಎಂದ.

ಏಕೋ ಏನೋ—ಬಾಗಿಲ ಮರೆಯಿಂದ ಈ ಐದಾಣೆಯ ವಿರುದ್ಧವಾಗಿ ಏನಿಲ್ಲೆಂದರೂ ಒಂದು ಮಾತಾದರೂ ಹೊರಡಬಹುದೆಂದು ಅಪೂರ್ವ ಆಶಿಸಿದ್ದ. ಅವಳ ಸೆರಗು ಅಲ್ಲಿನ್ನೂ ಕಾಣಿಸುತ್ತಿತ್ತು. ಆದರವಳು ಮಾತನಾಡಲಿಲ್ಲ. ಹೋಗುವ ಮುಂದೆ ಅಪೂರ್ವ ನಿಜವಾದ ಸಿಟ್ಟಿನಿಂದಲೇ ಮನಸಿನೊಳಗೆಂದುಕೊಂಡ: "ವಾಸ್ತವವಾಗಿಯೂ ಇವರು ಅತ್ಯಂತ ಕ್ಷುದ್ರರು. ದಾನ ಕೊಡುವ ವಿಷಯದಲ್ಲಿ ಇವರಿಗೆ ಐದಾಣೆಯೇ ಪರಮಾವಧಿ! ದುಡ್ಡೇ ಇವರ ಪ್ರಾಣ; ದುಡ್ಡೇ ಇವರ ಎಲುವು-ಕಂಡ; ದುಡ್ಡಿಗಾಗಿ ಇವರು ಮಾಡದ ಕೆಲಸವಿಲ್ಲ!"

ಅಪೂರ್ವ ಪರಿವಾರ ಸಮೇತನಾಗಿ ಏಳುವ ಹೊತ್ತಿಗೆ, ಅನಾಥನ ದೃಷ್ಟಿ ಹತ್ತು ಹನ್ನೊಂದು ವರುಷದ ಒಂದು ಹುಡುಗನ ಕಡೆ ಹೋಯಿತು. ಹುಡುಗನ ಕೊರಳಲ್ಲಿ ಉತ್ತರೀಯವಿತ್ತು; ಪಿತೃವಿಯೋಗ ಅಥವಾ ಅಂತಹ

ದೇನೋ ಒದಗಿರಬೇಕು. ಅವನ ವಿಧವೆ ತಾಯಿ ಕಂಬದ ಮರೆಯಲ್ಲಿ ಕುಳಿತಿರಬೇಕು. ಅನಾಥ ಆಶ್ಚರ್ಯದಿಂದ ಕೇಳಿದ: "ತಮ್ಮಾ, ನೀ ಯಾಕಿಲ್ಲಿ?"

ಹುಡುಗ ಬೆರಳು ಮಾಡಿ ತೋರಿಸಿ ಹೇಳಿದ: "ನಮ್ಮವ್ವ ಕೂತಿದ್ದಾಳೆ. ನಮ್ಮ ಬಹಳ ಹಣ ಇವರಲ್ಲಿದೆ ಎಂದು ಅವ್ವ ಹೇಳುತ್ತಾಳೆ."

ಕೇಳಿ ಎಲ್ಲರಿಗೂ ಆಶ್ಚರ್ಯ, ಕುತೂಹಲ. ಇದನ್ನು ಪೂರಾ ಅರಿತುಕೊಳ್ಳುವುದಕ್ಕಾಗಿ, ಸೀರಡಿಕೆ ಸಾವಾಗಿದ್ದರೂ ಅಪೂರ್ವ ವಿಪಿನನ ಕೈ ಹಿಡಿದು ಕುಳಿತುಕೊಂಡ.

ಏಕಾದಶಿ ಕೇಳಿದ: "ನಿನ್ನ ಹೆಸರೇನಪ್ಪ? ಎಲ್ಲಿಯವರು?"

"ನನ್ನ ಹೆಸರು ಶಶಿಧರ; ಇವರೂರವರು, ಕಾಲೀದಹದವರು."

"ನಿಮ್ಮಪ್ಪನ ಹೆಸರು?"

ಹುಡುಗನ ಪರವಾಗಿ ಅನಾಥ ಉತ್ತರವಿತ್ತ: "ಇವರಪ್ಪ ಸತ್ತು ಬಹಳ ದಿವಸವಾಯಿತು. ಇವರಜ್ಜ ರಾಮಲೋಚನ ಚಟರ್ಜಿ ಮಗ ಸತ್ತ ಕೂಡಲೆ ದೇಶಾಂತರ ಹೋದವನು ಏಳು ವರ್ಷಗಳ ತರುವಾಯ ಕೆಲವು ತಿಂಗಳ ಹಿಂದೆ ತಿರುಗಿ ಬಂದಿದ್ದ. ಮೊನ್ನೆ ಇವರ ಮನೆಗೆ ಬೆಂಕಿ ಹತ್ತಿ, ಅದನ್ನಾರಿಸಲು ಹೋದ ಮುದುಕ ಸುಟ್ಟುಕೊಂಡು ಸತ್ತ. ಮತ್ತೆ ಯಾರೂ ಇಲ್ಲ, ಈ ಮೊಮ್ಮಗನೇ ಶ್ರಾದ್ಧಕರ್ತ."

ಕಥೆ ಕೇಳಿ ಎಲ್ಲರೂ ಮಿಡುಕಿದರು. ಏಕಾದಶಿಯೊಬ್ಬ ಮಾತ್ರ ಸುಮ್ಮನಿದ್ದ. ಸ್ವಲ್ಪ ಹೊತ್ತಿನ ಮೇಲೆ ಪ್ರಶ್ನಿಸಿದ: "ಹಣದ ಬಗ್ಗೆ ಕೈಚೀಟಿ ಇದೆಯೆ? ಹೋಗು ನಿಮ್ಮವ್ವನನ್ನು ಕೇಳಿಕೊಂಡು ಬಾ."

ಹುಡುಗ ಕೇಳಿ ಬಂದು ಹೇಳಿದ: "ಕಾಗದ ಏನೂ ಇಲ್ಲ. ಎಲ್ಲ ಸುಟ್ಟು ಹೋಗಿವೆ.

"ಎಷ್ಟು ಹಣ?"

ವಿಧವೆ ಮುಂದೆ ಬಂದು ಸೆರಗು ಸರಿಪಡಿಸಿಕೊಂಡು ಹೇಳಿದಳು: "ಮಾವಂದಿರು ಸಾಯುವ ಮುಂಚೆ ಹೇಳಿದರು,, ಐನೂರು ರೂಪಾಯಿ ನಿಮ್ಮಲ್ಲಿಟ್ಟು ತೀರ್ಥಯಾತ್ರೆಗೆ ಹೋಗಿದ್ದರಂತೆ. ಅಪ್ಪಾ, ನಾವು ಬಹಳ ಬಡವರು. ಈಗ ಎಲ್ಲಾ ಏನು ಕೊಡಬೇಡಿರಿ. ಒಂದಿಷ್ಟು ಭಿಕ್ಷೆ ಕೊಡಿರಿ."

ವಿಧವೆ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಘೋಷಾಲ ಮಹಾಶಯ ಬರೆಯುವುದು ಬಿಟ್ಟು ಕೇಳುತ್ತ ಕುಳಿತಿದ್ದ. ಅವನು ಮುಂದೆ ಬಂದು ಕೇಳಿದ: "ಯಾರಾದರೂ ಸಾಕ್ಷಿಗೀಕ್ಷಿ?"

ವಿಧವೆ ಗೋಣು ಹಾಕಿ "ಇಲ್ಲ. ನಮಗೂ ಗೊತ್ತಿರಲಿಲ್ಲ. ಮಾವನವರು ಗೌಪ್ಯವಾಗಿಯೆ ಇಟ್ಟು ಹೋಗಿದ್ದರು." ಎಂದಳು.

ಘೋಷಾಲ ನಸುನಕ್ಕು ನುಡಿದ: "ಬರೀ ಅತ್ತರಾಗಲಿಲ್ಲ ಅಮ್ಮಾ. ದುಡ್ಡು ದುಗ್ಗಾಣಿ ಕೆಲಸ. ಕಾಗದವಿಲ್ಲ ಪತ್ರವಿಲ್ಲ, ಸಾಕ್ಷಿಯಿಲ್ಲ ಪ್ರಮಾಣವಿಲ್ಲ ಎಂದರೆ ಹೇಗೆ ಹೇಳು."

ಅವಳು ಬೋರಾಡಿ ಅಳತೊಡಗಿದಳು. ಆದರೆ ಅಳುವಿನ ಫಲ ಏನಾಗಬಹುದೆಂಬುದು ಯಾರಿಗೂ ತಿಳಿಯದುಳಿಯಲಿಲ್ಲ. ಏಕಾದಶಿ ಘೋಷಾಲನ ಕಡೆಗೆ ನೋಡಿ ನುಡಿದ: "ಐನೂರು ರೂಪಾಯಿ ಇಟ್ಟುದು ಕರಗಿ ಒಯ್ದಿದ್ದು ನನಗೆ ನೆನಪಾಗಲೊಲ್ಲದು. ತೆಗೆದು ನೋಡು, ಬರೆದಿವೆಯೋ ಹೇಗೆ?"

ಘೋಷಾಲ ಹುಂಕರಿಸಿದ: "ಹೊತ್ತಿಲ್ಲದ ಹೊತ್ತಿನಲ್ಲಿ ದೆವ್ವನ ಬಿಟ್ಟಿ ಯಾರು ಮಾಡಬೇಕು ಬಾಬೂ? ಸಾಕ್ಷಿಯಿಲ್ಲ, ಕಾಗದವಿಲ್ಲ –"

ಅವನ ಮಾತು ಮುಗಿಯುವುದರೊಳಗೇ ಬಾಗಿಲ ಮರೆಯಿಂದ ಉತ್ತರ ಬಂದಿತು: "ಕಾಗದ ಪತ್ರ ಇಲ್ಲವೆಂದು ಬ್ರಾಹ್ಮಣರ ದುಡ್ಡು ಮುಳುಗಿಸಬೇಕೇನು? ಹಳೆಯ ಖಾತೆ ನೋಡಿರಿ— ನಿಮಗಾಗದಿದ್ದರೆ ಇಲ್ಲಿ ಕೊಡಿರಿ, ನಾ ನೋಡುತ್ತೇನೆ."

ಎಲ್ಲರೂ ಆ ಕಡೆ ನೋಡಿದರು; ಅಪ್ಪಣೆ ವಿಧಿಸಿದವಳು ಯಾರ ಕಣ್ಣಿಗೂ ಬೀಳಲಿಲ್ಲ. ಘೋಷಾಲ ಮೆತ್ತಗಾಗಿ ಹೇಳಿದ: "ಎಷ್ಟು ವರ್ಷವಾಯಿತಮ್ಮ. ಅಷ್ಟು ದಿವಸಗಳ ಲೆಕ್ಕ ನೋಡುವುದು ಸುಮ್ಮನೆ ಅಲ್ಲ. ಖಾತೆ ಕೀರ್ದಿಗಳು ಹಾಗೇ ಒಟ್ಟಿವೆ. ಜಮಾ ಇದ್ದಿದ್ದರೆ ಅದೇನು ಮುಳುಗುವುದಿಲ್ಲ.'' ಎಂದು ವಿಧವೆಗೆ ಹೇಳಿದ:

"ಅಳಬೇಡ ತಂಗೀ, ಏಕಳುತ್ತೀ? ಕೊಡುವುದಿದ್ದರೆ ಕೊಟ್ಟೇ ಕೊಡುತ್ತದೆ. ನಾಳೆ ನಮ್ಮ ಮನೆಗೆ ಬಾ, ಎಲ್ಲ ವಿಷಯ ವಿಚಾರಿಸಿ ಲೆಕ್ಕಪತ್ರ ನೋಡಿ ಎಲ್ಲಾ ತಿಳಿಸಿ ಹೇಳುತ್ತೇನೆ. ಈಗ ಈ ಹೊತ್ತಿನೊಳಗೆ ಆಗುವುದಿಲ್ಲ."

"ಆಗಲಪ್ಪ, ನಾಳೆ ನಿಮ್ಮಲ್ಲಿಗೆ ಬರುತ್ತೇನೆ." ಎಂದು ವಿಧವೆ ತಟ್ಟನೆ ಸಮ್ಮತಿಯಿತ್ತಳು.

"ಬಾ" ಎಂದು ಘೋಷಾಲ ಗೋಣು ಹಾಕಿ ಎದುರಿನ ಖಾತೆಗಳನ್ನು ಅಂದಿನಮಟ್ಟಿಗೆ ಕಟ್ಟಿಟ್ಟ.

ಆದರೆ ವಿಷಯ ವಿಚಾರಿಸುವ ನೆವದಿಂದ ವಿಧವೆಯನ್ನು ಮನೆಗೆ ಕರೆದುದರ ಅರ್ಥ ಸ್ಪಷ್ಟವೇ ಇತ್ತು. ಒಳಗಿನಿಂದ ಗೌರಿಯೆಂದಳು: "ಎಂಟು ವರುಷದ ಹಿಂದಿನದು.— ಅಂದರೆ ೧೩೦೧ ನೆಯ ಸಾಲಿನ ಖಾತೆ ತೆಗೆದು ನೋಡಿರೊಂದಿಷ್ಟು."

"ಇಷ್ಟೇಕೆ ಅವಸರವಮ್ಮಾ?''

"ನನಗೆ ಕೊಡಿರಿ, ನಾ ನೋಡುತ್ತೇನೆ. ಬ್ರಾಹ್ಮಣ ಹೆಣ್ಣುಮಗಳು ಎರಡು ಹರದಾರಿ ನಡೆದು ಬಂದಿದ್ದಾಳೆ; ಈ ಬಿಸಿಲೊಳಗೆ ತಿರುಗಿ ಹೋಗಬೇಕು; ನಾಳೆ ಮತ್ತೆ ನಿಮ್ಮ ಹತ್ತಿರ ಬರಬೇಕು. ಇಷ್ಟೆಲ್ಲ ಬವಣೆ ಏಕೆ ಘೋಷಾಲ ಕಕ್ಕ?"

"ಹೌದು, ಘೋಷಾಲ ಮಹಾಶಯ. ಬ್ರಾಹ್ಮಣರ ಹೆಣ್ಮಗಳನ್ನು

ಸುಮ್ಮ ಸುಮ್ಮನೆ ಎಡತಾಕಿಸುವುದು ಸರಿಯೇ? ನೋಡು ನೋಡು, ಭಡಾನೆ ಒಂದಿಷ್ಟು ನೋಡಿಬಿಡು." ಎಂದ ಏಕಾದಶಿ.

ಘೋಷಾಲ ಸಿಟ್ಟು ಸಿಟ್ಟಿನಿಂದ, ಪಕ್ಕದ ಕೋಣೆಯಿಂದ ೧೩೮೧ ನೆಯ ಸಾಲಿನ ಖಾತೆ ತಂದ. ಎಂಟು ಹತ್ತು ನಿಮಿಷ ಹಾಳೆ ಮಗುಚಿ ಭಯಂಕರ ಆನಂದದಿಂದ ನುಡಿದ: "ಭಲೆ! ಏನು ಗೌರಕ್ಕನ ಬುದ್ಧಿ! ಒಂದೇ ಸಾಲಿನ ಖಾತೆ ನೋಡಿದಾಕ್ಷಣ ಸಿಕ್ಕಿತು. ರಾಮಲೋಚನ ಚಟರ್ಜಿಯವರ ಹೆಸರಲ್ಲಿ ಜಮೆ ಐನೂರು—"

ಏಕಾದಶಿ ಎಂದ: "ಘೋಷಾಲ ಮಶಾಯಿ, ಚಟ್ಟನೆ ಬಡ್ಡಿ ಲೆಕ್ಕ ಮಾಡು."

"ಆಂ, ಬಡ್ಡಿ ಸಹಿತ!" ಘೋಷಾಲ ಆಶ್ಚರ್ಯದಿಂದ ಕೇಳಿದ.

"ಏಕೆ, ಕೊಡಬಾರದು? ಹಣ ಇಷ್ಟು ದಿನ ವ್ಯವಹಾರದಲ್ಲಿ ತೊಡಗಿದೆಯಲ್ಲ. ಎಂಟು ವರ್ಷಗಳ ಬಡ್ಡಿ—ಈಚೆಯ ಕೆಲ ತಿಂಗಳದು ಇರಲಿ."

ಲೆಕ್ಕ ಮಾಡಲಾಗಿ ರಾಸು ಏಳುವರೆ ನೂರು ಹೊರಟಿತು. ಏಕಾದಶಿ ತಂಗಿಗೆ ಹೇಳಿದ: "ತಂಗೀ, ಪೆಟ್ಟಿಗೆಯಲ್ಲಿಯ ರೂಪಾಯಿ ತೆಗೆದುಕೊಂಡು ಬಾ. ಏನಮ್ಮಾ, ಎಲ್ಲಾ ಹಣ ಒಮ್ಮೆಲೆ ಒಯ್ಯುವೆಯಾ?"

ವಿಧವೆಯ ಅಂತರಂಗದ ಮೊರೆ ಅಂತರ್ಯಾಮಿ ಕೇಳಿದ. ಅವಳು ಕಣ್ಣೊರಸಿಕೊಂಡು ಹೇಳಿದಳು: "ಬೇಡಪ್ಪ, ಅಷ್ಟೇನೂ ಅಗತ್ಯವಿಲ್ಲ. ಈಗ ಐವತ್ತು ಕೊಡಿರಿ ಸಾಕು."

"ಹಾಗೇ ಮಾಡಮ್ಮಾ. ಘೋಷಾಲ ಮಹಾಶಯ, ಒಂದಿಷ್ಟು ಖಾತೆ ಕೊಡಿರಿ. ಸಹಿ ಮಾಡುತ್ತೇನೆ. ಉಳಿದ ಹಣಕ್ಕೆ ಒಂದು ಕೈಚೀಟಿ ಬರೆದು ಕೊಡಿರಿ."

ಘೋಷಾಲನೆಂದ: "ನಾನೇ ಸಹಿ ಮಾಡಿಕೊಡುತ್ತೇನೆ. ನೀವೇಕೆ ಮತ್ತೆ—"

"ಬೇಡ ಬೇಡ, ಇಲ್ಲಿ ಕೊಡಿರಿ. ನಾ ನೋಡುತ್ತೇನೆ." ಎಂದು ಏಕಾದಶಿ

ಖಾತೆಯನ್ನು ತೆಗೆದುಕೊಂಡು ಅರನಿಮಿಷ ಕಣ್ಣಾಡಿಸಿ ನಗುತ್ತೆಂದ: "ಘೋಷಾಲ ಮಹಾಶಯ, ಬ್ರಾಹ್ಮಣನ ಹೆಸರಲ್ಲಿ ಎರಡು ಚೊಕ್ಕ ಮುತ್ತುಗಳು ಜಮಾ ಇವೆಯಲ್ಲ! ನನಗೆ ಗೊತ್ತಿತ್ತು— ನಿಮಗೆ ಕಣ್ಣು ಯಾವಾಗಲೂ ಸಮ ಇರುವುದಿಲ್ಲ." ಎಂದು ಬಾಗಿಲ ಕಡೆ ನೋಡಿ ನಕ್ಕ. ಇಷ್ಟು ಜನರೆದುರಿಗೆ ಒಡೆಯ ವ್ಯಂಗ್ಯೋಕ್ತಿ ಆಡಿದುದಕ್ಕೆ ಘೋಷಾಲನ ಮೋರೆ ಕಪ್ಪಿಟ್ಟಿತು.

ಅಂದಿನ ಕೆಲಸವೆಲ್ಲ ಮುಗಿಸಿ ಕಾದ ಹಾದಿಗೆ ಬಂದಾಗ ಅಪೂರ್ವನ ಮನಸ್ಸಿನಲ್ಲಿ ವಿಪ್ಲವ ನಡೆದಿತ್ತು. ಘೋಷಾಲ ಜೊತೆಗಿದ್ದ. ಅವನೆಂದ: "ಬರ್ರಿ, ಬಡವನ ಮನೆಯೊಳಗೆ ಕೊನೆಗೆ, ಒಂದಿಷ್ಟು ಬೆಲ್ಲ ಬಾಯೊಳಗೆ ಹಾಕಿಕೊಂಡು ನೀರು ಕುಡಿದು ಹೋಗಿರಿ"

ಅಪೂರ್ವ ಏನೂ ಹೇಳದೆ ಹಿಂಬಾಲಿಸಿದ. ಘೋಷಾಲನ ಮೈಯೆಲ್ಲ ಉರಿಯುತ್ತಿತ್ತು. ಏಕಾದಶಿಯನ್ನು ಕುರಿತು ಅವನೆಂದ: "ನೋಡಿದಿರಾ, ಕೀಳು ಜಾತಿಯ ಮಗನ ಮೂರ್ಖತನ! ತಮ್ಮಂತಹ ಬ್ರಾಹ್ಮಣ ಹುಡುಗರ ಪಾದಧೂಳಿ ಮನೆಯೊಳಗೆ ಬಿದ್ದದ್ದು ರಂಡೆಮಗನ ಹದಿನಾರು ತಲೆಯವರ ಪುಣ್ಯ. ಮಗ ತಿರುಕರಿಗೆ ಕೊಟ್ಟ ಹಾಗೆ ಐದಾಣೆ ಕೊಡಲಿಕ್ಕೆ ಬಂದಿದ್ದ!"

ವಿಪಿನ ಹೇಳಿದ: "ಎರಡು ದಿನ ತಾಳಿರಿ, ಪಾಪಿ ಮುಂಡೆಮಗನಿಗೆ ಬಹಿಷ್ಕಾರ ಹಾಕಿಸಿ ಐದಾಣೆ ಕೊಟ್ಟೇ ಊರು ಬಿಟ್ಟೋಡಿಸುತ್ತೇನೆ. ರಾಖಾಲ ಬಾಬು ನಮ್ಮ ಸಂಬಂಧಿಕ, ತಿಳಿಯಿತಿಲ್ಲವೊ ಘೋಷಾಲ ಮಹಾಶಯ!"

"ನಾ ಬ್ರಾಹ್ಮಣ. ಎರಡೂ ಹೊತ್ತು ಸಂಧ್ಯಾಹ್ನಿಕ ಮಾಡದೆ ಬಾಯೊಳಗೆ ನೀರು ಹಾಕುವುದಿಲ್ಲ. ಎರಡು ಮುತ್ತುಗಳಿಗಾಗಿ ಮಧ್ಯಾಹ್ನದ ಹೊತ್ತಿನಲ್ಲಿ ಹೇಗೆ ಅಪಮಾನಗೊಳಿಸಿದ, ಕಣ್ಮುಟ್ಟ ನೋಡಿದಿರಲ್ಲ. ಮಗಗೆ ಒಳ್ಳೆಯದಾದೀತೆ? ಕಲ್ಪನೆಯಲ್ಲೂ ತರಬೇಡಿರಿ. ಆ ಮಗಳು—ಅವಳನ್ನು ಮುಟ್ಟಿದರೆ ಸ್ನಾನ ಮಾಡಬೇಕು— ಬ್ರಾಹ್ಮಣರ ಹುಡುಗರಿಗೆ ಕುಡಿಯಲಿಕ್ಕೆ ನೀರು ತಂದು ಕೊಡುತ್ತಾಳೆ! ದುಡ್ಡಿನ ಮದ ಹೇಗಿದೆ ನೋಡಿರಿ."

ಅಪೂರ್ವ ಈವರೆಗೆ ಮಾತಿನಲ್ಲಿ ಸೇರಿರಲಿಲ್ಲ. ಆವನೊಪ್ಮ್ಮೆಲೆ ನಡುದಾರಿಯಲ್ಲಿಯೇ ನಿಂತು ಎಂದ: "ಅನಾಥ, ನಾ ತಿರುಗಿ ಹೋಗುವೆ. ನನಗೆ ನೀರಡಿಕೆ ಬಹಳವಾಗಿದೆ."

ಘೋಷಾಲ ಆಶ್ಚರ್ಯದಿಂದ ಕೇಳಿದ: "ತಿರುಗಿ ಎಲ್ಲಿಗೆ ಹೋಗುವಿರಿ? ಇದೇ, ನಮ್ಮ ಮನೆ ಕಾಣಿಸುತ್ತಿದೆ."

ತಲೆ ಹಾಕಿ ಅಪೂರ್ವ ಹೇಳಿದ: "ನೀವು ಇವರನ್ನು ಕರೆದುಕೊಂಡು ಹೋಗಿರಿ. ನಾ ಏಕಾದಶಿಯ ಮನೆಗೇ ನೀರು ಕುಡಿಯಲು ಹೋಗುತ್ತೇನೆ!"

ಏಕಾದಶಿಯ ಮನೆಯಲ್ಲಿ ನೀರು ಕುಡಿಯಲಿಕ್ಕೆ! ಎಲ್ಲರೂ ಹುಬ್ಬೇರಿಸಿಕೊಂಡು ನಿಂತುಬಿಟ್ಟರು. ವಿಪಿನ ಅವನನ್ನು ಕೈ ಹಿಡಿದು ಸೆಳೆದು ನುಡಿದ: "ಬಾ ಬಾ, ಮಧ್ಯಾಹ್ನದ ಬಿಸಿಲೊಳಗೆ ಬೀದಿಯೊಳಗೆ ನಿಂತು ತಮಾಷೆ ಮಾಡಬೇಡ. ನಿನಗೆ ಏಕಾದಶಿಯ ತಂಗಿಯ ಕೈಯ ನಿರು ಬೇಕು, ಅಲ್ಲವೇನೋ!"

ಅಪೂರ್ವ ಕೈ ಕೊಸರಿಕೊಂಡು ದೃಢ ಸ್ವರದಿಂದ ಹೇಳಿದ: "ಹೌದು ನಿಜವಾಗಿಯೂ. ಆಕೆ ಕೊಡುವ ನೀರಿಗಾಗಿಯೇ ತಿರುಗಿ ಹೋಗುವುದು. ನೀವು ಘೋಷಾಲ ಮಹಾಶಯರಲ್ಲಿ ಕುಡಿದು ಬರ್ರಿ. ಆ ಗಿಡದ ಬುಡದಲ್ಲಿ ಹಾದಿ ನೋಡುತ್ತಿರುತ್ತೇನೆ."

ಅವನ ಶಾಂತ ದೃಢ ಕಂಠಸ್ವರದಿಂದ ಬೆರಗಾಗಿ ಘೋಷಾಲ ನುಡಿದ: "ಅದಕ್ಕೆ ಪ್ರಾಯಶ್ಚಿತ್ತವುಂಟು, ಬಲ್ಲಿರಾ?"

ಅನಾಥನೆಂದ: "ಹುಚ್ಚು ಹಿಡಿದಿಲ್ಲವಷ್ಟೆ?"

ಅಪೂರ್ವ ಹೇಳಿದ: "ಅದೇನೋ ಗೊತ್ತಿಲ್ಲ. ಆದರೆ ಪ್ರಾಯಶ್ಚಿತ್ತ ತೆಗೆದುಕೊಳ್ಳುವುದಿದ್ದರೆ, ಹಿಂದುಗಡೆ ಸಾವಕಾಶ ವಿಚಾರ ಮಾಡಲಿಕ್ಕೆ ಬಂದೀತು. ಈಗದು ಶಕ್ಯವಿಲ್ಲ." ಎಂದು ಆ ಉರಿಬಿಸಿಲಿನಲ್ಲಿ ಏಕಾದಶಿಯ ಮನೆಯ ಕಡೆಗೆ ರಭಸದಿಂದ ಹೊರಟುಬಿಟ್ಟ.

---

# ನಾಲ್ಕು



ಮಜುಮದಾರ ಮನೆತನ ಹೆಚ್ಚಳ ಹೊಂದಿತ್ತು. ಊರಲ್ಲಿ ಒಳ್ಳೆಯ ಗೌರವವುಳ್ಳದ್ದು. ಹಿರಿಯಣ್ಣ ಗುರುಚರಣ ಆ ಮನೆತನದ ಹಿರಿಯ. ಏಕೆ, ಊರಿಗೇ ಹಿರಿಯ ಎಂದರೆ ಅತ್ಯುಕ್ತಿಯಲ್ಲ. ದೊಡ್ಡ ಮನುಷ್ಯರು ಇನ್ನೂ ಕೆಲವರಿದ್ದರು. ಆದರೆ ಇಷ್ಟೊಂದು ಶ್ರದ್ಧಾಭಕ್ತಿಗಳಿಗೆ ಪಾತ್ರರಾದವರು ಯಾರೂ ಶ್ರೀಕುಂಜಪುರದಲ್ಲಿರಲಿಲ್ಲ. ಅವನು ದೊಡ್ಡ ನೌಕರಿ ಮಾಡಿದವನಲ್ಲ—ಊರು ಬಿಟ್ಟು ಹೋಗಲೊಪ್ಪಿದ್ದರೆ ಅವನಿಗದು ಸಿಕ್ಕಲಾರದ್ದಲ್ಲ. ಯೌವನಾರಂಭದಲ್ಲಿ ನೆರೆಯ ಜಿಲ್ಲಾ ಸ್ಕೂಲಿನಲ್ಲಿ ಅವನು ಶಿಕ್ಷಕನಾಗಿ ಸೇರಿಕೊಂಡಿದ್ದ; ತಿರುಗಿ ಯಾವ ಲೋಭವಿಂದಲೂ ಆ ಶಿಕ್ಷಣಾಲಯದ ಮಮತೆಯನ್ನು ಬಿಟ್ಟು ಬೇರೆ ಕಡೆ ಹೋಗಲೊಪ್ಪಲಿಲ್ಲ. ಅವನು ನಿವೃತ್ತಿ ಪಡೆದು ಮೂರು ವರ್ಷವಾಗಿದೆ. ತಿಂಗಳಾ ಇಪ್ಪತ್ತೈದು ರೂಪಾಯಿ ನಿವೃತ್ತಿ ವೇತನ ಬರುತ್ತಿದೆ. ಇಂದಿಗೂ ಅವನಿಗೆ ದುಡ್ಡೇ ದೊಡ್ಡಪ್ಪ ಆಗಿಲ್ಲ. ಹಾಗಿದ್ದರೆ ಜಗಳ ತಂಟೆಗಳನ್ನು ಬಗೆಹರಿಸುವುದರಲ್ಲಿ, ಬಣಗಳ ತೊಡಕುಗಳನ್ನು ಬಿಡಿಸುವುದರಲ್ಲಿ ಅವನ ತೀರ್ಪುಗಳು ಊರಲ್ಲಿ ಸರ್ವಮಾನ್ಯವಾಗುತ್ತಿರಲಿಲ್ಲ. ಅವನ ನಿಸ್ಸೀಮ ಧರ್ಮನಿಷ್ಠೆ, ದೃಢ ಸಚ್ಚರಿತ್ರೆ, ಸಾಧುತ್ವಗಳಿಗೆ ಎಲ್ಲರೂ ಗೌರವದಿಂದ ತಲೆವಾಗುವರು. ವಯಸ್ಸು ಅರುವತ್ತಾರರ ಎಡಬಲ. ಸುತ್ತುಮುತ್ತಲಿನ ಹತ್ತಿಪ್ಪತ್ತು ಊರುಗಳಲ್ಲಿ, ಅತೀ ಶೀಲವಂತ ಧರ್ಮವಂತನನ್ನು ನಗೆಯಾಡುವುದಕ್ಕೆ 'ಅವನೇನು ಗುರುಚರಣನೇ ಆಗಿದ್ದಾನೆ' ಎನ್ನುವುದು ವಾಡಿಕೆಯಾಗಿತ್ತು.

ಗುರುಚರಣನಿಗೆ ಹೆಂಡತಿಯಿಲ್ಲ, ಒಬ್ಬನೇ ಒಬ್ಬ ಮಗ ಇದ್ದಾನೆ—ವಿಮಲ. ಜಗತ್ತಿನಲ್ಲಿ ಅದ್ಭುತವೆನಿಸಿಕೊಳ್ಳುವಂತಹದು ನಿಜವಾಗಿ ಯಾವುದೂ

ಇಲ್ಲ. ಇಲ್ಲದಿದ್ದರೆ ಇಂತಹ ದೊಡ್ಡ ಸರ್ವಗುಣಸಂಪನ್ನನಾದ ತಂದೆಯ ಹೊಟ್ಟೆಯಲ್ಲಿ ಇಂತಹ ಸರ್ವದೋಷ ಸಂಪನ್ನ ಹೇಗೆ ಹುಟ್ಟಿದ ಎಂಬುದೇನೂ ತಿಳಿಯುವುದಿಲ್ಲ.

ಮಗನೊಡನೆ ತಂದೆಯ ಸಂಬಂಧ ಇಲ್ಲದ ಹಾಗೇ ಆಗಿತ್ತು. ಅವನು ತಮ್ಮನ ಮಗ ಪಾರಸನನ್ನು ತುಂಬ ಹಚ್ಚಿಕೊಂಡಿದ್ದ. ಅವನೇ ಹೊಟ್ಟೆಯ ಮಗನಂತಿದ್ದ. ಪಾರಸನೀಗ ಎಂ. ಎ. ಆಗಿ ಕಾಯದೆ ಓದುತ್ತಿದ್ದಾನೆ. ಅವನಿಗೆ ವರ್ಣಪರಿಚಯದ ಪ್ರಥಮ ಪುಸ್ತಕ ಮೊದಲುಗೊಂಡು ಇಲ್ಲಿಯ ವರೆಗೆ ಕಲಿಸಿದ್ದು ದೊಡ್ಡಪ್ಪನೇ. ವಿಮಲ ಏನೂ ಕಲಿಯಲಿಲ್ಲವೆಂಬ ದುಃಖ ಪಾರಸನಿಂದ ನೀಗಿತು.

೨

ತಮ್ಮ ಹರಿಚರಣ ಇಷ್ಟು ದಿನ ಬೇರೆ ದೇಶದಲ್ಲಿ ಸಾಮಾನ್ಯ ನೌಕರಿ ಮಾಡುತ್ತಿದ್ದ. ಯುದ್ಧಾನಂತರ ಅವನೊಮ್ಮೆಗಿಲೆ ಹೇಗೆ ದೊಡ್ಡ ಮನುಷ್ಯನಾದನೋ ತಿಳಿಯದು. ಕೆಲಸ ಬಿಟ್ಟು ಮನೆಗೆ ಬಂದ. ಹೆಚ್ಚು ಬಡ್ಡಿ ದರದ ಸಾವುಕಾರಿಕೆ ಹೂಡಿದ, ಹೆಂಡತಿಯ ಹೆಸರಿನಿಂದ ಒಂದು ತೋಟ ಕೊಂಡ, ಮತ್ತೇನೇನೋ ಮಾಡತೊಡಗಿದ. ಅಂತೂ ನೆರೆಹೊರೆಯ ಆರೇಳು ಹಳ್ಳಿಗಳ ಜನಗಳ ಮೂಗಿಗೂ ಅವನ ಹಣದ ನಾತ ಬಡಿಯಿತು.

ಒಂದಿನ ಹರಿಚರಣ ವಿನಯದಿಂದ ಅಣ್ಣನಿಗೆಂದ: "ಅಣ್ಣಾ, ಬಹಳ ದಿವಸದಿಂದ ನಿನಗೊಂದು ಮಾತು ಹೇಳಬೇಕೆನ್ನುತಿದ್ದೆ—"

"ಒಳ್ಳೆಯದು, ಹೇಳು" ಎಂದ ಗುರುಚರಣ.

"ಇನ್ನು ನೀ ಒಬ್ಬನೇ ಎಷ್ಟೆಂದು ಮಾಡುತ್ತೀ? ವಯಸ್ಸು ಬಹಳವಾಗಿದೆ—"

"ಹೌದು, ಅರವತ್ತನೇ ವರ್ಷ ನಡೆದಿದೆ."

" ಅದಕ್ಕೆ ನಾ ಹೇಳುವುದು—ನಾನಿನ್ನೂ ಮನೆಯೊಳಗೇ ಇರುತ್ತೇನೆ; ಭೂಮಿ ಕಾಣಿಗಳು ಅಸ್ತವ್ಯಸ್ತವಾಗಿವೆ. ಒಂದಿಷ್ಟು ಸರಿಗೊಳಿಸಿ ನಾನೇ—"

ಗುರುಚರಣ ಕ್ಷಣಹೊತ್ತು ತಮ್ಮನ ಮುಖ ನೋಡಿ ನುಡಿದ: "ಭೂಮಿ ಕಾಣಿಗಳು ತಾವು ಇರುವ ಹಾಗೆಯೇ ಇವೆ ಕೆಟ್ಟೂ ಇಲ್ಲ. ಎಂದರೆ ನಿನಗೀಗ ಬೇರೆಯಾಗುವ ವಿಷಯ ಮಾತನಾಡುತ್ತಿರುವೆಯೇನು ? ''

ಹರಿಚರಣ ನಾಚಿಕೆಯಿಂದ ನಾಲಿಗೆ ಕಚ್ಚಿಕೊಂಡು, " ಇಲ್ಲಣ್ಣಾ, ಇದ್ದ ಹಾಗೆಯೇ, ನಡೆದ ಹಾಗೆಯೇ ಎಲ್ಲ ಇರುವುದು. ನಿನ್ನ ಕಡೆ ಏನೇನಿದೆ ಅದನ್ನು ಗುರುತು ಮಾಡಿಡಬೇಕೆಂದಿಷ್ಟೆ. ಅಲ್ಲದೆ ಅಡಿಗೆ ಊಟದ ವಿಷಯ ಜೊಂಜಾಟದ್ದು— ಎಲ್ಲ ಏಕತ್ರವಾಗಿಯೇ ಇರುವುದು— ಆದರೆ ಅಡಿಗೆ ಬೇರೆಯಾಗಬೇಕು— ತಿಳಿಯಿತೇನು ?— ''

" ಏಕೆ ತಿಳಿಯುವುದಿಲ್ಲ, ತಿಳಿವೇ ತಿಳಿಯುವುದು. ಆಗಲಿ, ನಾಳೆಯಿಂದ ಹಾಗೆಯೇ ಆಗುವುದು. "

" ಹೇಗೆ ಗುರುತು ಹಾಕುವುದೆಂಬುದನ್ನು ಗೊತ್ತು ಮಾಡಿದ್ದೀಯಾ ? "

" ಈ ವರೆಗೆ ಅದರ ಅಗತ್ಯವಿರಲಿಲ್ಲ. ಈಗ ಅಗತ್ಯವುಂಟಾಗಿದ್ದರೆ ಸರಿಯಾಗಿ ಮೂರು ಪಾಲು ಮಾಡಿದರೆ ತೀರಿತು. "

ಹರಿಚರಣ ಆಶ್ಚರ್ಯದಿಂದ ನುಡಿದ: " ಮೂರು ಪಾಲು ಹೇಗೆ ? ನಡುವಿನ ಸೊಸೆ ವಿಧವೆ, ಮಕ್ಕಳು ಮರಿಯಿಲ್ಲ, ಅವಳಿಗೆ ಹೇಗೆ ಪಾಲು ? ಎರಡು ಪಾಲು ಆಗಬೇಕು. "

ಗುರುಚರಣ ಗೋಣಳ್ಳಾಡಿಸಿ, " ಇಲ್ಲ, ಮೂರಾಗಬೇಕು. ನಡುವಿನ ಸೊಸೆಗೆ ಜೀವಿಸಿರುವವರೆಗೂ ಪಾಲು ಸಲ್ಲಬೇಕು " ಎಂದ.

ಹರಿಚರಣನಿಗೆ ರೇಗಿತು. " ಕಾಯದೆಯಿಂದ ಸಲ್ಲಲಾರದು. ಪೋಟಗಿಗೆ ಮಾತ್ರ ಬಾಧ್ಯಳು " ಎಂದ.

"ಅದಕ್ಕಿಂತಲೂ ಬಾಷ್ಪಳೇ— ಮನೆಯು ಪಥು ತಾನೆ!"

"ತಿಳಿದುಕೋ— ನಾಳೆ ನಾರಲು ಇಲ್ಲವೆ ಒತ್ತೆ ಹಾಕಲು ಮನಸು ಮಾಡಿದರೆ?"

"ಕಾಯಿದೆಯಿಂದ ಆ ಹಕ್ಕು ಹುಟ್ಟಿದರೆ ಮಾಡುವಳು."

ಹರಿಚರಣನ ಮೋರೆ ಕಪ್ಪಿಟ್ಟಿತು.

*    *    *    *

ಮರುದಿನ ಹರಿಚರಣ ಹಗ್ಗ ಕೋಲು ತೆಗೆದುಕೊಂಡು ಮನೆ ಅಳೆಯ ತೊಡಗಿದ. ಗುರುಚರಣ ಮಾತಾಡಲೂ ಇಲ್ಲ, ತಡೆಯಲೂ ಇಲ್ಲ. ಎರಡು ಮೂರು ದಿನಗಳ ಮೇಲೆ ಇಟ್ಟಿಗೆ, ಕಲ್ಲು, ಗಚ್ಚು ಸುಣ್ಣ ಬಂದು ಬಿದ್ದವು. ಮನೆಯ ಹಳಬ ಆಳು ಬಂದು ತಿಳಿಸಿದ: "ನಾಳೆಯಿಂದ ಅಮಲು ಸುರು ವಾಗುವುದು, ಚಿಕ್ಕ ಬಾಬುಗಳ ಗೋಡೆ ಏರುವುದು."

ಗುರುಚರಣ ನಗುತ್ತ ನುಡಿದ: "ಕಾಣುತ್ತಲೇ ಇವೆ, ಹೇಳುವು ದೇನು!"

ಐದಾರು ದಿನಗಳ ತರುವಾಯ ಒಂದಿನ ಸಂಜೆಯ ಮುಂದೆ ಪಂಚುನ ತಾಯಿ (ದಾಸಿ) ಬಂದು, "ನಡುವಣ ಸೊಸೆ ಹೊರಗೆ ನಿಂತಿದ್ದಾರೆ ದೊಡ್ಡ ಬಾಬು" ಎಂದು ಹೇಳಿದಳು.

ಹಿರಿ ಸೊಸೆ ಸತ್ತ ಮೇಲೆ ನಡುವಿನ ಸೊಸೆಯೇ ಮನೆಯ ಯಜಮಾ-ನಿಕೆ ವಹಿಸಿದ್ದಳು. ಆಕೆ ಮರೆಯಲ್ಲಿ ನಿಂತು ಮೃದುಕಂಠದಿಂದ ಹೇಳಿದಳು: "ಮಾವನ ಮನೆಯೊಳಗೆ ನನಗೇನೂ ಹಕ್ಕಿಲ್ಲವೇ? ಚಿಕ್ಕ ಸೊಸೆ ಹಗಲೂ ರಾತ್ರಿ ಬಯ್ಯುತ್ತಾಳಲ್ಲ!"

"ಏಕಿಲ್ಲ ತಂಗೀ? ಅವಳಿಗಿರುವಷ್ಟೇ ನಿನಗೂ ಹಕ್ಕಿದೆ." ಎಂದ ಗುರುಚರಣ.

ಪಂಚುನ ತಾಯಿಯೆಂದಳು: "ಆದರೆ ಹೀಗೆ ನಡೆದರೆ ಮನೆಯೊಳಗಿರುವುದೇ ಕಷ್ಟ."

ಕ್ಷಣ ಸುಮ್ಮನಿದ್ದು ಗುರುಚರಣ ಹೇಳಿದ: "ಪಾರಸನಿಗೆ ಬರಲಿಕ್ಕೆ ಬರೆದಿದ್ದೇನೆ, ಪಂಚುನ ತಾಯಿ. ಆತ ಬಂದನೆಂದರೆ ಎಲ್ಲ ಸರಿಹೋಗುವುದು-ಅಲ್ಲಿಯ ತನಕ ತಾಳಿಕೊಳ್ಳಿರಿ."

ನಡುಸೊಸೆಯೆಂದಳು: "ಪರಂತು ಪಾರಸನೇನು—"

ಗುರುಚರಣ ಅಷ್ಟಕ್ಕೇ ತಡೆದು "ಪರಂತು ಏನಿಲ್ಲ, ತಂಗೀ, ನಮ್ಮ ಪಾರಸನಿಗೆ 'ಪರಂತು ಗಿರಂತು' ಹತ್ತುವುದಿಲ್ಲ. ಹರಿ ಅವನ ತಂದೆಯೇನೋ ಹೌದು, ಆದರೆ ಅವನು ನನ್ನ ಮಗನೇ. ಇಡೀ ಜಗತ್ತೇ ಬತ್ತಬಟ್ಟೆಗಾಗಲಿ, ಅವನು ಮಾತ್ರ ನನ್ನವನೇ ಆಗಿರುವ. ತನ್ನ ದೊಡ್ಡಪ್ಪ ಅನ್ಯಾಯ ಮಾಡುವುದಿಲ್ಲ ಎಂದವನು ತಿಳಿಯದೇ ಹೋದರೆ, ನಾನಿಷ್ಟು ದಿನ ವ್ಯರ್ಥವಾಗಿ ಹೆರವರ ಹುಡುಗನನ್ನು ಹೊತ್ತು ಹೊರೆದು ಬೆಳೆಸಿದೆನೆನ್ನಬೇಕು!"

ದಾಸಿಯೆಂದಳು: "ಆ ವರ್ಷ ದೇವಿ ಬಂದಿದ್ದಳು. ಆಗ ನಿಮ್ಮ ಹೊರತು ಅವರನ್ನು ಸಾವಿನ ಬಾಯೊಳಗಿಂದ ಯಾರು ಉಳಿಸುತ್ತಿದ್ದರು ದೊಡ್ಡ ಬಾಬು? ಆಗ ಚಿಕ್ಕ ಬಾಬು ಎಲ್ಲಿದ್ದರು, ಮಲತಾಯಿ ಎಲ್ಲಿದ್ದರು! ಹೆದರಿಕೊಂಡು ಹತ್ತಿರ ಕೂಡ ಹಾಯುತ್ತಿರಲಿಲ್ಲ. ಹಗಲೇನು, ರಾತ್ರಿಯೇನು ದೊಡ್ಡಪ್ಪ ಒಬ್ಬರೇ!"

"ಪಾರಸನ ತಾಯಿ ಇದ್ದರಾದರೂ ಇಷ್ಟು ಮಾಡುತ್ತಿದ್ದರೋ ಇಲ್ಲವೋ" ಎಂದಳು ನಡುಸೊಸೆ.

ಗುರುಚರಣನಿಗೆ ಬಹಳ ಸಂಕೋಚವೆನಿಸಿತು. "ಹೋಗಲಿ ಬಿಡು ತಂಗೀ, ಅದೆಲ್ಲ" ಎಂದ.

ಇಬ್ಬರೂ ಹೊರಟು ಹೋದರು. ವಿಮಲ-ಪಾರಸರಿಬ್ಬರೂ ಜೋಡಾಗಿ

ನಿದ್ಧ ಗುರುಚರಣನ ಕಣ್ಮುಂದೆ ಬಂದು ನಿಂತರು. ಕಿಡಿಕಿಯಿಂದ ಅಂಧಕಾರ ಮಯ ಆಕಾಶದ ಕಡೆ ನೋಡಿ ನೋಡಿ ನಿಟ್ಟುಸಿರಿಬಿಟ್ಟು, ಬಳಿಕ ದೊಡ್ಡ ಬೆತ್ತವನ್ನು ತೆಗೆದುಕೊಂಡು ಚದುರಂಗ ಆಡಲಿಕ್ಕೆ ಸರಕಾರರ ಮನೆಗೆ ಹೋದ.

ಮರುದಿನ ಮಧ್ಯಾಹ್ನ ಗುರುಚರಣ ಊಟಕ್ಕೆ ಕುಳಿತಿದ್ದ. ಮನೆಯ ಉತ್ತರ ಕಡೆಯ ಪಡಸಾಲೆಯ ಕೆಲವೊಂದು ಭಾಗವನ್ನು ಬಳಸಿ ಹರಿಚರಣನ ಅಡಿಗೆಮನೆ. ಅಲ್ಲಿಂದ ತೀಕ್ಷ್ಣ ನಾರೀಕಂಠದ ಎಲ್ಲೆಲೆಕ್ಕವಿಲ್ಲದ ಕಟೂಕ್ತಿಗಳು ಕೇಳಬರುತ್ತಿದ್ದವ. ಅವನ ಊಟಕ್ಕೆ ವಿಘ್ನವುಂಟಾಗಲು ಅದೇ ಸಾಕಾಗಿತ್ತು. ಅದರಲ್ಲಿ ಗಂಡು ದನಿಯೂ ಕೇಳಬರಲು ಅವನ ಕಿವಿ ನೆಟ್ಟಗಾದವು. ಮರು ಕ್ಷಣವೇ ಅವನೆದ್ದುಬಿಟ್ಟ.

ಅಂಗಳದಲ್ಲಿ ಹೋಗಿ ನಿಂತ. ತಮ್ಮನಿಗೆ ಕೂಗಿ ಹೇಳಿದ: “ ಹರಿಚರಣ, ಹೆಂಗುಸರ ಮಾತಿಗೆ ನಾ ಲಕ್ಷ್ಯಗೊಡುತ್ತಿರಲಿಲ್ಲ. ಆದರೆ ನೀ ಗಂಡಸು ಕೂತು ಹಿರಿಯಳಾದ ಅತ್ತಿಗೆಯನ್ನು ಈ ರೀತಿ ಅವಮಾನ ಮಾಡತೊಡಗಿದರೆ, ಅವಳಿಗೀ ಮನೆಯಲ್ಲಿ ಇರಲಿಕ್ಕೇ ಸಾಧ್ಯವಿಲ್ಲ. ”

ಇದಕ್ಕೆ ಯಾರೂ ಉತ್ತರ ಕೊಡಲಿಲ್ಲ. ಆದರೆ ಹೊರಗೆ ಹೋಗುವಾಗ ಚಿಕ್ಕ ಸೊಸೆಯ ತೀಕ್ಷ್ಣ ಕಂಠ ಸ್ವರ ಕಿವಿಗೆ ಬಿತ್ತು. ಅಪಹಾಸದಿಂದ ಗಂಡನಿಗೆಂದಳು: “ ಹೀಗೆ ಅಪಮಾನ ಮಾಡಬೇಡಿರಾ, ಹೇಳಲಿಲ್ಲೆಂದೀರಿ, ನಡುವಣ ಸೊಸೆ ಮನೆಯೊಳಗೇ ಇರಲಿಕ್ಕಿಲ್ಲ! ಆ ಮೇಲೇನಾದೀತು! ”

ಅದಕ್ಕೆ ಹರಿಚರಣ ಹೇಳಿದ: “ ಜಗತ್ತು ರಸಾತಳಕ್ಕಿಳಿದೀತು, ಮತ್ತೇನು! ಹೋಗಬೇಡವೆಂದು ಯಾರು ಆಣೆ ಹಾಕಿದ್ದಾರೆ? ಹೋದರೆ ತಣ್ಣಗಾಗುವುದು! ”

ಗುರುಚರಣ ನಿಂತು ಕೇಳಿ, ಅವರ ಮಾತು ಮುಗಿದಬಳಿಕ ನೀರವವಾಗಿ ಹೊರಹೊರಟ.

೩

ಹೆಡ್ ಮಾಸ್ತರರ ಮಗಳ ಮದುವೆಗಾಗಿ ಗುರುಚರಣ ಕೃಷ್ಣನಗರಕ್ಕೆ ಹೊರಟಿದ್ದ. ಅಷ್ಟರಲ್ಲಿ ಪಾರಸ ಬಂದಿದ್ದಾನೆಂದೂ ಬಂದೊಡನೆ ಜ್ವರದಿಂದ ಮಲಗಿದ್ದಾನೆಂದೂ ಸುದ್ದಿ ಕೇಳಿದ. ಗಾಬರಿಯಾಗಿ ಪಾರಸನ ಕೋಣೆಗೆ ಹೋಗುತ್ತಿದ್ದವನು ಇದಿರಿಗೆ ತವ್ಮನನ್ನು ಕಂಡು "ಪಾರಸಗೆ ಜ್ವರ ಬಂದಿವೆಯೆ?" ಎಂದು ಕೇಳಿದ.

ತವ್ಮ ಹೂ ಎಂದು ಹೊರಟುಹೋದ. ಕೆಲಸದೊಡತಿ ತವರುಮನೆಯ ತೊತ್ತು ದಾರಿ ಕಟ್ಟಿ, "ನೀವು ಒಳಗೆ ಹೋಗಬೇಡಿರಿ" ಎಂದಳು.

"ಹೋಗಬಾರದು? ಏಕೆ?"

"ಒಳಗೆ ಅಕ್ಕನವರು ಇದ್ದಾರೆ."

"ಅವರಿಗೆ ಸ್ವಲ್ಪ ಹೋಗಲಿಕ್ಕೆ ಹೇಳು."

"ಅದು ಹೇಗೆ ಹೋಗುತ್ತಾರೆ? ಮಗನ ತಲೆಯ ಮೇಲೆ ಕೈಯಾಡಿಸುತ್ತಿದ್ದಾರೆ." ಎಂದು ತೊತ್ತು ಕೆಲಸಕ್ಕೆ ಹೊರಟುಹೋದಳು.

ಗುರುಚರಣ ಕನಸಿನೊಳಗಿದ್ದಂತೆ ಕ್ಷಣ ಹೊತ್ತು ನಿಂತಿದ್ದು ಪಾರಸನನ್ನು ಕೂಗಿ ಮಾತನಾಡಿಸಿದ: "ಈಗ ಹೇಗಿವೆ ಮಗೂ?"

ಈ ವ್ಯಾಕುಲ ಪ್ರಶ್ನೆಗೆ ಒಳಗಿಂದ ಉತ್ತರ ಬರಲಿಲ್ಲ. ತೊತ್ತು ಎಲ್ಲಿಂದಲೋ ಉತ್ತರವಿತ್ತಳು: "ತವ್ಮವರಿಗೆ ಜ್ವರ ಬಂದಿವೆ, ಕೇಳಿಯೋ ಇದ್ದೀರಿ!"

ಗುರುಚರಣ ಎರಡುಮೂರು ನಿಮಿಷ ಸ್ತಬ್ಧವಾಗಿ ನಿಂತು, ಬಳಿಕ ಮೆಲ್ಲಮೆಲ್ಲನೆ ಹೊರಬಿದ್ದು, ಯಾರೊಡನೇನೂ ಮಾತನಾಡದೆ, ನೆಟ್ಟಗೆ ನಿಲ್ದಾಣಕ್ಕೆ ಹೊರಟ.

ಮದುವೆಯ ಸಡಗರ ಗಡಿಬಿಡಿ ಮುಗಿದಬಳಿಕ ಹೆಡ್ ಮಾಸ್ತರು

ಏಕಾಂತದಲ್ಲಿ ಕರೆದೊಯ್ದು ಕೇಳಿದರು: " ಏನು ಸಮಾಚಾರ ಗುರುಚರಣ? ಹರಿಚರಣ ನಿಮಗೆ ತಿರುಗಿ ನಿಂತಿದ್ದಾನಂತಲ್ಲ? "

ಗುರುಚರಣ ಅನ್ಯಮನಸ್ಕನಂತೆ ಉತ್ತರವಿತ್ತ: " ಹರಿಚರಣನೆ? ಇಲ್ಲವಲ್ಲ! "

" ಇಲ್ಲವೆಂದರೇನು? ಹರಿಚರಣನ ಬೂತಾಟಿಕೆ ಎಲ್ಲರೂ ಕೇಳಿದ್ದಾರೆ!"

ಗುರುಚರಣನಿಗೆ ಒಮ್ಮೆಲೆ ವಿಷಯ ನೆನಪಾಯಿತು. " ಹಾಂ, ಹಾಂ, ಭೂಮಿಕಾಣಿಗಳ ಬಗ್ಗೆ ಸ್ವಲ್ಪ ಗಡಿಬಿಡಿ ನಡಿಸಿದ್ದಾನೆ" ಎಂದ.

ಅವನ ಮಾತಿನ ರೀತಿಗೆ ಹೆಡ್‌ಮಾಸ್ತರು ಖೇದಗೊಂಡರು. ಇಬ್ಬರೂ ನಿಷ್ಕಪಟ ಬಾಲಮಿತ್ರರು. ಆದರೂ ಗುರುಚರಣ ವಿಷಯಕ್ಕೇ ಔದಾಶೀನ್ಯದ ಮುಸುಕು ಹಾಕುತ್ತಿದ್ದಾನೆಂಬುದನ್ನು ಕಂಡು ಅವರು ತಿರುಗಿ ಪ್ರಶ್ನಿಸಲಿಲ್ಲ.

ಅಣ್ಣ ಕೃಷ್ಣನಗರದಿಂದ ತಿರುಗಿ ಬರುವುದರೊಳಗೆ, ಇವೇ ಸಮಯವೆಂದು ಹರಿಚರಣ ಅಂಗಳವಲ್ಲಿ ಅಲ್ಲಲ್ಲಿ ತಗ್ಗು ತೋಡಿ ಕಾಲಿಡಲು ಸ್ಥಳವಿಲ್ಲದಂತೆ ಮಾಡಿದ್ದ. ಅವನು ತನ್ನ ಮನಸಿಗೆ ಬಂದ ಹಾಗೆ ಮನೆಯನ್ನು ವಿಭಾಗಿಸಿ ನಡುವೆ ಗೋಡೆ ನಿರ್ಮಿಸುತ್ತಾನೆಂದು ಗುರುಚರಣ ತಿಳಿದುಕೊಂಡ. ಅವನ ಹತ್ತಿರ ದುಡ್ಡಿದೆ, ಅರ್ಥಾತ್ ಮತ್ತೊಬ್ಬರ ಮತಾಮತದ ಅಗತ್ಯ ಅವನಿಗಿಲ್ಲ.

ಗುರುಚರಣ ತನ್ನ ಕೋಣೆಗೆ ಹೋಗಿ ಬಟ್ಟೆತೆಗೆಯುತ್ತಿದ್ದ. ನಡುವಣ ಸೊಸೆಯೊಂದಿಗೆ ಪಂಚುನ ತಾಯಿ ಹೋಗಿ ನಿಂತಳು. ಅವನು ಸಮಾಚಾರ ಕೇಳಬೇಕೆನ್ನುವುದರೊಳಗೆ ಅವಳು ಅಳುತ್ತಳುತ್ತ, ನೊನ್ನೆ ಮುಂಜಾನೆ ಚಿಕ್ಕ ಬಾಬು ನಡುವಣ ಸೊಸೆಯನ್ನು ಕತ್ತು ಹಿಡಿದು ದಬ್ಬಿ ಮನೆಯಿಂದ ಹೊರಗೆ ಹಾಕಿದ್ದರೆಂದೂ ತಾನಿಲ್ಲದಿದ್ದರೆ ಹೊಡೆದು ಜೀವವನ್ನೇ ತೆಗೆಯುತ್ತಿದ್ದರೇನೋ ಎಂದೂ ತಿಳಿಸಿದಳು.

ಗುರುಚರಣನಿಗೆ ಎಲ್ಲ ವಿಷಯ ತಿಳಿದುಕೊಳ್ಳಲು ವಿಲಂಬವಾಗಲಿಲ್ಲ. ಆದರೂ ಮಣ್ಣಗೊಂಬೆಯಂತೆ ಅವಾಕ್ಕಾಗಿ ನಿಸ್ಪಂದವಾಗಿ ನಿಂತು ಒಮ್ಮೆಲೆ

ಕೇಳಿದ: “ ನಿಜವಾಗಿಯೂ ಹರಿಚರಣ ನಿಮ್ಮ ಮೈಗೆ ಕೈಹಚ್ಚಿದನೇ ಬಹೂರಾಣಿ! ಇಷ್ಟು ಸಾಹಸ ಮಾಡಿದನೆ?”

ತುಸು ವೇಳೆ ಸುಮ್ಮನಿದ್ದು “ ಆಗ ಪಾರಸ ಬಹುಶಃ ಹಾಸಿಗೆ ಹಿಡಿದು ಮಲಗಿದ್ದನೆಂದು ಕಾಣುತ್ತದೆ?” ಎಂದ.

ಪಂಚುನ ತಾಯಿ ಹೇಳಿದಳು: “ ಅವರಿಗೇನೂ ಆಗಿಯೇ ಇಲ್ಲ ದೊಡ್ಡ ಬಾಬೂ, ಇನ್ನೂ ಈಪೊತ್ತು ಬೆಳಿಗ್ಗೆ ಕಲಕತ್ತೆಗೆ ಹೋದರು.”

“ಏನೂ ಆಗಿಲ್ಲವೆ? ಎಂದರವನು ತಮ್ಮಪ್ಪನ ಕಾಯಕ ತಿಳಿದುಕೊಂಡೇ ಹೋದನೆ?”

“ಹಾಂ, ಸಂಪೂರ್ಣ” ಎಂದಳು ಪಂಚುನ ತಾಯಿ.

ಗುರುಚರಣನ ಕಾಲಡಿಯ ನೆಲವೇ ಸರಿದು ಹೋಯಿತು. “ ಬಹೂರಾಣೀ, ಇಂಥ ಮಹಾಪರಾಧಕ್ಕೆ ಅವನಿಗೆ ಶಿಕ್ಷೆಯಾಗದಿದ್ದರೆ, ಈ ಮನೆಯೊಳಗೆ ನಿಲ್ಲುವುದೇ ನನಗೆ ಸಾಧ್ಯವಿಲ್ಲ. ನಡೆ, ಸಮಯ ಮೀರಿಲ್ಲ, ಗಾಡಿ ತರುತ್ತೇನೆ, ನೀ ಕೋರ್ಟಿನಲ್ಲಿ ವ್ಯಾಜ್ಯ ಹೂಡಬೇಕು.” ಎಂದ.

ನಡುವಣ ಸೊಸೆ ಬೆಚ್ಚಿದಳು. ಗುರುಚರಣ ಹೇಳಿದ: “ಮನೆತನಸ್ಥ ಹೆಣ್ಣುಮಕ್ಕಳಿಗೆ ಈ ಕೆಲಸ ಒಪ್ಪುವುದಲ್ಲ, ನನಗೆ ತಿಳಿಯುತ್ತದೆ. ಆದರೆ ಇಂಥ ಭಯಂಕರ ಅಪಮಾನವನ್ನು ಸುಮ್ಮನೆ ಸಹಿಸಿಕೊಂಡರೆ ಭಗವಂತ ನಿಮ್ಮ ಬಗ್ಗೆ ವಿತುಷ್ಟನಾಗುತ್ತಾನೆ. ಇದಕ್ಕೂ ಹೆಚ್ಚಿಗೆ ನನಗೆ ತಿಳಿಯದು.”

ನಡುವಣ ಸೊಸೆ ಹೇಳಿದಳು: “ ನೀವು ನನಗೆ ತಂದೆಯಂತೆ ಇದ್ದೀರಿ. ನೀವು ನನಗೆ ಹೇಳಿದ್ದನ್ನು ಏನೂ ಸಂಕೋಚವಿಲ್ಲದೆ ಮಾಡುವೆ.”

ಹರಿಚರಣನ ವಿರುದ್ಧ ಮೊಕದ್ದಮೆ ಹೂಡಿಯಾಯಿತು. ಗುರುಚರಣ ತನ್ನ ಹಿಂದಿನ ಕಾಲನ ಬಂಗಾರದ ಸರಪಳಿ ಮಾರಿ ದೊಡ್ಡ ವಕೀಲರಿಗೆ ಫೀಸ್ ಕೊಟ್ಟ. ಗೊತ್ತಾದ ದಿನ ವಿಚಾರಣೆ ನಡೆಯಿತು. ಪ್ರತಿವಾದಿ ಹರಿಚರಣ ಉಪಸ್ಥಿತನಾದ, ಆದರೆ ವಾದಿನಿ ಕಾಣಲಿಲ್ಲ. ವಕೀಲ ಏನು ಹೇಳಿದನೋ

ಏನು ಬಿಟ್ಟನೋ, ನ್ಯಾಯಾಧೀಶ ಮೊಕದ್ದಮೆ ತೆಗೆದು ಹಾಕಿದ. ಗುಂಪಿನಲ್ಲಿ ಗುರುಚರಣನ ದೃಷ್ಟಿ ಅಕಸ್ಮಾತ್ ಪಾರಸನ ಮೇಲೆ ಬಿದ್ದಿತ್ತು. ಅವನಾಗ ಆಕಡೆ ಮೋರೆ ತಿರುಗಿಸಿ ನಸುನಗುತ್ತಿದ್ದ.

ಮನೆಗೆ ಬಂದು ಕೇಳಿದಾಗ, ತವರುಮನೆಯಲ್ಲಿ ಯಾರಿಗೋ ಜಡ್ಡೆಂದು ಸುದ್ದಿ ಕೇಳಿ ನಡುವಿನ ಸೊಸೆ ನೈವೈಯಿಲ್ಲನೆ ಊಟವಿಲ್ಲದೆ ಇದೇ ಹೊರಟು ಹೋದಳೆಂದು ಗುರುಚರಣನಿಕೆ ತಿಳಿದುಬಂದಿತು.

ಪಂಚುನ ತಾಯಿ ಕಾಲುತೊಳೆಯಲು ನೀರು ತಂದು ಕೊಟ್ಟು ಒಮ್ಮೆಲೆ ಅತ್ತುಬಿಟ್ಟಳು: "ರಾತ್ರಿ ಸುಳ್ಳು, ಹಗಲು ಸುಳ್ಳು—ನೀವು ಮತ್ತೆಲ್ಲಿಗಾದರೂ ಹೋಗಿಬಿಡಿರಿ ದೊಡ್ಡ ಬಾಬೂ, ಈ ಪಾಪಿ ಸಂಸಾರದಲ್ಲಿ ನಿಮಗೆ ಸ್ಥಳವಿಲ್ಲ." ಎಂದಳು.

ಮೊಕದ್ದಮೆ ಗೆದ್ದುದಕ್ಕೆ ಹರಿಚರಣನ ಮನೆಯೊಳಗೆ ಚಂಡೀ ಪೂಜೆ ಯಾಯಿತು. ಡೊಳ್ಳು, ನಗಾರಿ, ನೌಬತ್ತುಗಳ ವಾದ್ಯಕ್ಕೆ ಊರಿಗೆ ಊರೇ ಗದಗಮಿಸಿತು.

೪

ಇಬ್ಭಾಗವಾದ ಪಿತ್ರಾರ್ಜಿತ ಗೃಹದಲ್ಲಿ ಒತ್ತಟ್ಟಿಗೆ ಹರಿಚರಣನ ಸಂಸಾರ; ಒತ್ತಟ್ಟಿಗೆ ಗುರುಚರಣ, ಬಹು ದಿನದ ದಾಸಿ ಪಂಚೂನ ತಾಯಿ.

ಮರುದಿನ ಮುಂಜಾನೆ ಪಂಚುನ ತಾಯಿ ಬಂದು "ಅಡಿಗೆಗೆ ಎಲ್ಲ ಅಣಿ ಮಾಡಿದ್ದೇನೆ ದೊಡ್ಡ ಬಾಬು." ಎಂದು ಹೇಳಿದಳು.

"ಅಡಿಗೆಗೆ? ಓ--ಹೋ--ಸರಿ. ನಡೆ ನಾ ಬಂದೆ." ಎಂದು ಗುರುಚರಣ ಏಳುತ್ತಲಿದ್ದ. ಆಗ ದಾಸಿ ಹೇಳಿದಳು: "ಅವಸರವೇನಿಲ್ಲ ದೊಡ್ಡ ಬಾಬೂ, ಸ್ವಲ್ಪ ಹೊತ್ತೇರಲಿ; ಅಲ್ಲಿಯ ತನಕ ಸ್ನಾನ ಮಾಡಿಕೊಂಡು ಬರ್ರಿ."

"ಒಳ್ಳೇದು, ಹೋಗುತ್ತೇನೆ" ಎನ್ನುತ್ತ ಗುರುಚರಣ ಕಣ್ಣು ಮುಚ್ಚಿ

ತೆರೆಯುವುದರೊಳಗೆ ಗಂಗಾಸ್ನಾನಕ್ಕೆ ಹೋಗಲು ಸಿದ್ಧನಾಗಿ ನಿಂತ. ಅವನ ಕೆಲಸಕ್ಕೂ ಮಾತಿಗೂ ಏನೇನೂ ವಿಸಂಗತಿಯಿರಲಿಲ್ಲ. ಆದರೂ ಸಂಚುನ ತಾಯಿಗೆ ಏಕೆ ಕೆಟ್ಟಿಸಿತೋ ಏನೋ, ಇವರು ಮುಂಚಿನ ದೊಡ್ಡ ಬಾಬು ಅಲ್ಲ ಎಂದು ಅವಳಿಗೆ ಮತ್ತೆಮತ್ತೆ ಎನಿಸತೊಡಗಿತು.

ಅವಳು ಒಳಗೆ ಹೋಗಿ ಒದರಾಡತೊಡಗಿದಳು: “ ಎಂದೂ ಒಳ್ಳೆಯು ದಾಗಲಿಕ್ಕಿಲ್ಲ ! ಖಂಡಿತ ಒಳ್ಳೆಯದಾಗುವುದಿಲ್ಲ ! ಇದಕ್ಕೆ ದೇವರು ಶಿಕ್ಷೆ ಕೊಟ್ಟೇ ಕೊಡುತ್ತಾನೆ ! ”

ಯಾರಿಗೆ ಒಳ್ಳೆಯದಾಗುವುದಿಲ್ಲ, ಯಾರಿಗೆ ದೇವರು ಶಿಕ್ಷೆ ಕೊಡುತ್ತಾನೆ ಅದೇನಿಲ್ಲ. ಆದರೆ ಆ ದಿನ ಚಿಕ್ಕ ಬಾಬುವಿನ ಕಡೆ ಯಾರೂ ಈ ಬಗ್ಗೆ ಜಗ ಳಕ್ಕೆ ಹುರಿಯಾಗಲಿಲ್ಲ.

ಹೀಗೆಯೇ ದಿನಗಳು ಕಳೆಯುತೊಡಗಿದವು.

ತನ್ನ ಏಕಮಾತ್ರ ಪುತ್ರ ಸತ್ಪುತ್ರನಲ್ಲ ಎಂಬುದು ಗುರುಚರಣನಿಗೆ ಗೊತ್ತಿತ್ತು. ಕೆಲವು ತಿಂಗಳುಗಳ ಹಿಂದೆ ಒಂದೆರಡು ಗಂಟೆ ಮನೆಗೆ ಬಂದಿದ್ದ. ತಿರುಗಿ ಅವನ ದರ್ಶನವಿಲ್ಲ. ಆಗ ಬ್ಯಾಗಿನಲ್ಲಿ ಏನೇನೋ ಮುಚ್ಚಿಟ್ಟು ಹೋಗಿದ್ದ. ಗುರುಚರಣ ಪಾರಸನನ್ನು ಕರೆದು “ ಇದರೊಳಗೇನಿವೆ ನೋಡು ” ಎಂದು ತೋರಿಸಿದ್ದ. ಅವನು ಚೆನ್ನಾಗಿ ನೋಡಿ “ ಏನೋ ಕಾಗದ ಇವೆ. ಬಹುಶಃ ದತ್ತಾವೇಜ ಇರಬಹುದು. ದೊಡ್ಡಪ್ಪಾ, ಇವನ್ನು ಸುಟ್ಟುಬಿಡಲೇ ? ” ಎಂದಿದ್ದ. ಗುರುಚರಣ ಅಗತ್ಯದವಿದ್ದರೆ ಎಂದು ಕೇಳಿದ್ದಕ್ಕೆ ಅವನು “ ಅಗತ್ಯದವೇನೋ ಇವೆ, ವಿಮಲನಿಗೆ ಆದರೆ ಗಂಡಾಂತರವನ್ನು ಮನೆ ಯೊಳಗಿಟ್ಟುಕೊಳ್ಳುವುದು ನಿಮಗೇನಗತ್ಯ ? ” ಎಂದಿದ್ದ. “ ಗೊತ್ತಿಲ್ಲದೆ ನಷ್ಟ ಮಾಡಬಾರದು, ಪಾರಸ, ಯಾರದಾದರೂ ಸತ್ಯಾನಾಶವಾಗಿ ಬಿಡಬಹುದು. ಎಲ್ಲಿಯಾದರೂ ಮುಚ್ಚಿಟ್ಟುಬಿಡು; ಯಾವಾಗಲಾದರೂ ನೋಡಿದರಾಯಿತು” ಎಂದು ಗುರುಚರಣ ಹೇಳಿದ್ದ.

ಗುರುಚರಣನಿಗೆ ಈ ಘಟನೆ ನೆನಪಿರಲಿಲ್ಲ. ಇಂದು ಗಂಗಾಸ್ನಾನ ಮಾಡಿಕೊಂಡು ಬಂದು ಇನ್ನು ಅಡಿಗೆಗೆ ಹೋಗುವವ, ಅಷ್ಟರೊಳಗೆ ಬ್ಯಾಗ್ ಹಿಡಿದುಕೊಂಡು ಪಾರಸ, ಹರಿಚರಣ, ಊರ ಕೆಲ ಸಜ್ಜನರು, ಪೋಲೀಸರು ಬಂದರು.

ಅದರ ವಿಷಯವಿಷ್ಟು: ವಿಮಲ ದರೋಡೆಗಾರನಿದ್ದಾನೆ, ಸದ್ಯ ಕಾಣೆಯಾಗಿದ್ದಾನೆ ಎಂದು ಪತ್ರಿಕೆಗಳಲ್ಲಿ ಪಾರಸ ಓದಿ ಪೋಲೀಸರಿಗೆ ಎಲ್ಲ ವಿಷಯ ಹೇಳಿದ್ದ. ಬ್ಯಾಗು ಈವರೆಗೂ ಅವರ ಹತ್ತಿರವೇ ಇತ್ತು. ವಿಮಲ ಕೆಟ್ಟ ಹುಡುಗ, ಕುಡುಕ, ಇನ್ನೂ ಅನೇಕ ಆನುಷಂಗಿಕ ದೋಷಗಳೂ ಅವನಲ್ಲಿವೆ. ಕಲಕತ್ತೆಯಲ್ಲಿದ್ದು ಏನೋ ಒಂದು ಸಾಮಾನ್ಯ ನೌಕರಿ ಮಾಡಿ ಇದನ್ನೆಲ್ಲವನ್ನೂ ನಡೆಸಿದ್ದಾನೆ. ಆದರೆ ಅವನು ಕಳವು ದರೋಡೆ ಮಾಡುತ್ತಿರಬಹುದೆಂದು ತಂದೆ ಕನಸಿನಲ್ಲಿಯೂ ಸಂದೇಹಗೊಂಡಿರಲಿಲ್ಲ. ಕೆಲ ಹೊತ್ತು ಅವನು ಪಾರಸನ ಮುಖವನ್ನು ಒಂದೇ ಸವನೆ ನೋಡಿದ. ಅವನ ಕಣ್ಗೊನೆಗಳಿಂದ ಕಂಬನಿ ತಟಕ್ಕಿಕ್ಕತೊಡಗಿದವು. "ಎಲ್ಲಾ ನಿಜವಿದೆ; ಪಾರಸ ಹೇಳಿದ್ದರಲ್ಲಿ ಒಂದೂ ಸುಳ್ಳಿಲ್ಲ" ಎಂದ ಕೊನೆಗೆ.

ಪೋಲೀಸ್ ಅಧಿಕಾರಿ ಇನ್ನೊಂದೆರಡು ಪ್ರಶ್ನೆ ವಿಚಾರಿಸಿ ಗುರುಚರಣನನ್ನು ಕೈಬಿಟ್ಟ. ಹೊರಡುವ ಹೊತ್ತಿನಲ್ಲಿ ಆತ ಬಾಗಿ ಮುದುಕನ ಪಾದ ಮುಟ್ಟಿ ಹೇಳಿದ: "ನೀವು ವಯಸ್ಸಿನಿಂದ ಹಿರಿಯರು, ಮೇಲಾಗಿ ಬ್ರಾಹ್ಮಣರು. ನನ್ನ ತಪ್ಪನ್ನು ಎಣಿಸಬೇಡಿರಿ; ಇಂಥ ಅತಿ ದುಃಖಕರ ಕೆಲಸವನ್ನು ನಾ ಹಿಂದೆಂದೂ ಮಾಡಿರಲಿಲ್ಲ."

ಕೆಲವು ತಿಂಗಳು ಕಳೆದ ಬಳಿಕ ವಿಮಲನಿಗೆ ಏಳು ವರ್ಷಗಳ ಶಿಕ್ಷೆಯಾಯಿತೆಂದು ಸುದ್ದಿ ಬಂದಿತು.

೫

ಮತ್ತೆ ನಗಾರಿ ಸೌಬತ್ತುಗಳೊಡನೆ ಸಂಭ್ರಮದಿಂದ ಶುಭಚಂಡಿಯ ಪೂಜೆ ಮಾಡುವ ಏರ್ಪಾಡು ನಡೆಯಿತು. "ಇದೆಲ್ಲ ಬೇಡ" ಎಂದ ಪಾರಸ.

“ ಏಕೆ ? ” ಎಂದು ಹರಿಚರಣ ಕೇಳಿದ.

“ ನನಗೆ ಸೇರುವುದಿಲ್ಲ. ”

“ ಸೇರದಿದ್ದರೆ ಕಲಕತ್ತೆಗೆ ಹೋಗಿ ಅಲೆದಾಡಿ ಬಾ ಈ ಒಂದು ದಿನ. ಜಗನ್ಮಾತೆಯ ಪೂಜೆಯಿದು-- ಧರ್ಮಕಾರ್ಯದಲ್ಲಿ ಅಡ್ಡ ಬರಬೇಡ. ”

ಅಂತೂ ಧರ್ಮಕಾರ್ಯದಲ್ಲಿ ಯಾವ ಆತಂಕವೂ ಉಂಟಾಗಲಿಲ್ಲವೆಂದು ಹೇಳಬೇಕಿಲ್ಲ.

ಎಂಟು ಹತ್ತು ದಿನಗಳ ತರುವಾಯ, ಒಂದಿನ ಮುಂಜಾನೆ ಗುರುಚರಣನ ಮನೆಯಿಂದ ಒದರಾಟ ಚೀರಾಟ ಕೇಳಬಂದಿತು. ಕೆಲ ಹೊತ್ತಿನಲ್ಲಿ ಗವಳಗಿತ್ತಿ ಅಳುತ್ತ ಹೊರಕ್ಕೆ ಬಂದಳು. ಅವಳ ಮೂಗಿನಿಂದ ನೆತ್ತರು ಸೋರುತ್ತಿತ್ತು. ಹರಿಚರಣ ಗಾಬರಿಯಿಂದ ಕೇಳಿದ: “ ನೆತ್ತರೇಕೆ ಬಂತು ಮೋಕ್ಷದಾ ? ಏನು ಸಮಾಚಾರ ? ”

ರೋದನ ಕೇಳಿ ಮನೆಯುವರೆಲ್ಲರೂ ಬಂದು ನೆರೆದರು. ಮೋಕ್ಷದಾ ಹೇಳಿದಳು: “ ಹಾಲಿನಲ್ಲಿ ನೀರು ಕೂಡಿಸಿದ್ದೆನೆಂದು, ದೊಡ್ಡ ಬಾಬು ಹೊಡೆದು ತಗ್ಗಿನಲ್ಲಿ ಕೆಡವಿಬಿಟ್ಟರು. ”

ಹರಿಚರಣನೆಂದ: “ ಯಾರು ಯಾರು ? ಅಣ್ಣನೇ ? ನಡೆ— ”

ಪಾರಸನೆಂದ: “ ದೊಡ್ಡಪ್ಪನೆ ? ಸುಳ್ಳು ! ”

ಚಿಕ್ಕ ಸೊಸೆಯೆಂದಳು: “ ಭಾವನವರು ಹೆಂಗುಸರ ಮೈಗೆ ಕೈ ಹಚ್ಚುವರೆ ? ನಿನಗೇನು ಕನಸು ಬಿದ್ದಿದೆಯೋ ಗವಳಗಿತ್ತಿ ? ”

ಅವಳು ತನ್ನ ಮೈಮೇಲಿನ ಗಾಯ-ಮಣ್ಣು ತೋರಿಸುತ್ತ ದೇವರಾಣೆ ಇಟ್ಟುಕೊಂಡು ತಾ ಹೇಳಿದುದು ನಿಜವೆಂದಳು.

ಇಂಜಕ್ಶನ್ನಿನ ಕೃಪೆಯಿಂದ ಗೋಡೆ ಕಟ್ಟುವುದು ನಿಂತು ಹೋಗಿತ್ತು. ಆದರೆ ಅಂಗಳದೊಳಗಿನ ತಗ್ಗುಗಳು ಹಾಗೆಯೇ ಇದ್ದವು, ಮುಚ್ಚಿರಲಿಲ್ಲ.

ಗುರುಚರಣ ಹೊಡೆದುದರಿಂದ ಅವುಗಳಲ್ಲೊಂದರಲ್ಲಿ ಬಿದ್ದು ಅವಳಿಗೆ ಗಾಯವಾಗಿತ್ತು.

"ನನ್ನ ಸಂಗಡ ನಡೆ, ವ್ಯಾಜ್ಯ ಹೂಡು." ಎಂದು ಹೇಳಿದ ಹರಿಚರಣ.

"ಎಂಥ ಅಸಂಭವದ ಮಾತಾಡುತ್ತೀರಿ ನೀವು! ಭಾವನವರು ಹೆಂಗುಸರ ಮೈಗೆ ಕೈ ಹಚ್ಚುವರೆ? ಅದೆಲ್ಲಾ ಸುಳ್ಳು!" ಎಂದಳು ಅವನ ಹೆಂಡತಿ.

ಪಾರಸ ಏನೊಂದೂ ಮಾತನಾಡದೆ ಸ್ತಬ್ಧವಾಗಿ ನಿಂತಿದ್ದ.

ಹರಿಚರಣ ಹೇಳಿದ: "ಸುಳ್ಳಾದರೆ ಸೋತಾಳು. ಆದರೆ ಅಣ್ಣನ ಬಾಯಿಂದ ಸುಳ್ಳು ಹೊರಡಲಾರದು. ನಿಜವಿದ್ದರೆ ಶಿಕ್ಷೆಯಾಗುವುದು."

ಹಂಚಿಕೆಯನ್ನು ಕೇಳಿ ಹೆಂಡತಿಗೆ ಸುಬುದ್ಧಿ ಉಂಟಾಯಿತು. "ಹಾಗಾದರೆ ಸರಿ. ಮೊಕದ್ದಮೆ ಹೂಡಿಸಿರಿ. ಚೆಲೋ ಶಿಕ್ಷೆಯಾಗುವುದು" ಎಂದಳು.

ಆದುದೂ ಹಾಗೆಯೇ-- ಅಣ್ಣನ ಬಾಯಿಂದ ಸುಳ್ಳು ಹೊರಡಲಿಲ್ಲ. ಕೋರ್ಟಿನ ನ್ಯಾಯದಂತೆ ಅವನಿಗೆ ಹತ್ತು ರೂಪಾಯಿ ದಂಡವಾಯಿತು.

ಈಗ ಶುಭಚಂಡಿಯ ಪೂಜೆಯೇನಾಗಲಿಲ್ಲ. ಆದರೆ ಮರುದಿನ ಕೆಲ ಹುಡುಗರು ಗುರುಚರಣನ ಹಿಂದೆ ಹಿಂದೆ ಕೂಗಾಡುತ್ತ ಒದರಾಡುತ್ತ ತಿರುಗುತ್ತಿದ್ದುದು ಕಂಡುಬಂದಿತು. ಗವಳಿಗಿತ್ತಿಯನ್ನು ಹೊಡೆದ ಬಗ್ಗೆ ಒಂದು ಹಾಡೂ ಅಷ್ಟರೊಳಗೆ ಹುಟ್ಟಿತ್ತು.

೬

ರಾತ್ರಿ ಸುಮಾರು ಎಂಟಾಗಿದ್ದಿತು. ಹರಿಚರಣನ ಬೈಠಕ್ಕು ಸೇರಿತ್ತು. ಇತ್ತೀಚೆಗೆ ಊರಿನ ಆಧಾರಸ್ತಂಭಗಳು ಇಲ್ಲಿಯೇ ಕೂಡುತ್ತಿದ್ದವು.— ಒಬ್ಬ ಒಂದು ಸ್ವಾರಸ್ಯದ ಸುದ್ದಿ ತಂದ. 'ಕಮ್ಮಾರ ಹುಡುಗರು ವಿಶ್ವಕರ್ಮ ಪೂಜೆಗೆ ಕಲಕತ್ತೆಯಿಂದ ನಾಚಿನವರನ್ನು ಕರೆಸಿದ್ದಾರೆ; ಅವರ ನಾಚಿನ ಕೂಟದಲ್ಲಿ ಗುರುಚರಣ ಕೂತಿದ್ದಾನೆ.'

ಹರಿಚರಣ ಬಿದ್ದು ಬಿದ್ದು ನಕ್ಕು, “ ಹುಚ್ಚಿಲ್ಲಿಯೋ ಇವ! ಕೇಳಿರಿವನ ಮಾತು! ಅಣ್ಣ ನಾಚಿಗೆ ಹೋಗಿದ್ದಾನಂತೆ! ಯಾವ ಗೆಡಂಗದಿಂದ ಬಂದೆಯೋ ಅವಿನಾಶ? ” ಎಂದ.

“ ಕಣ್ಣಾರೆ ನೋಡಿ ಬಂದಿದ್ದೇನೆ ” ಎಂದು ಅವಿನಾಶ ಪ್ರಮಾಣ ಮಾಡಿ ಹೇಳಿದ.

ಒಬ್ಬ ಮನುಷ್ಯ ಓಡಿದ— ದಿಟವಾದ ಸುದ್ದಿ ತರಲಿಕ್ಕೆ. ಹತ್ತು ನಿಮಿಷಗಳಲ್ಲ ತಿರುಗಿ ಬಂದು ಹೇಳಿದ: “ ಹೌದು, ಖಂಡಿತ ಸತ್ಯ. ಬರೀ ನಾಚು ನೋಡುತ್ತಿಲ್ಲ. ವಸ್ತ್ರದಲ್ಲಿ ಕಟ್ಟಿ ಅವರಿಗೆ ಮೆಚ್ಚು ಕೊಟ್ಟುದನ್ನೂ ನಾ ಕಂಡೆ. ”

ತೀರಿತು, ಒಬ್ಬನೆಂದ— “ ಒಂದಿನ ಹೀಗಾಗುವುದೆಂದು ತಿಳಿದದ್ದೇ ಇತ್ತು. ” ಯಾರೋ ಎಂದರು— “ ತಪ್ಪಿಲ್ಲದೇ ಹೆಂಗುಸಿನ ಮೇಲೆ ಕೈ ಮಾಡಿದಾಗಲೇ ನಮಗೆನಿಸಿತ್ತು! ” ಮಗನ ದರೋಡೆಯ ವಿಷಯವೆತ್ತಿ ಒಬ್ಬ ಹೇಳಿದ: “ ಅವನಿಂದ ತಂದೆಯ ಶೀಲವನ್ನು ಅನುಮಾನಿಸಿಕೊಳ್ಳಬಹುದು! ” ಇಂತಹವೇ ಎಷ್ಟೆಷ್ಟೋ ಮಾತುಗಳನ್ನಾಡಿದುದಾಯಿತು.

ಆವೊತ್ತು ಮಾತನಾಡದಿದ್ದವನೆಂದರೆ ಹರಿಚರಣನೊಬ್ಬನೇ. ಅವನು ಅನ್ಯಮನಸ್ಕನಂತೆ ತೆಪ್ಪಗೆ ಕುಳಿತಿದ್ದ. ಅವನಿಗೆ ಏಕೋ ಏನೋ ಚಿಕ್ಕಂದಿನ ವಿಷಯಗಳು ನೆನಪಾದವು— ಇವನೇ ನನ್ನ ಅಣ್ಣನೆ? ಇವನೇ ಗುರುಚರಣ ಮಜುಮದಾರನೆ?

೭

ಎರಡೆರಡೂವರೆ ಗಂಟೆ ರಾತ್ರಿಯಾದರೂ ನಾಚು ಮುಗಿಯುವುದಕ್ಕೆ ಇನ್ನೂ ಅವಕಾಶವಿತ್ತು. ವಿಶ್ವಕರ್ಮಾಪೂಜೆ ಬೇಗನೆಯೇ ಮುಗಿದು ಹೋಗಿತ್ತು. ಉತ್ತರ ಪೂಜೆ ಮಾತ್ರ ಇನ್ನೂ ನಡೆದಿತ್ತು: ಭಕ್ತರು ಹೆಂಡ ಕುಡಿದು, ಕಂಡ ತಿಂದು, ರಂಡೆಯರನ್ನು ಕುಣಿಸಿ ದಕ್ಷಯಜ್ಞದಂತೆ ನೆರವೇರಿ

ಸುತ್ತಲಿದ್ದರು. ಬಹಳ ಜನ ಮೈಮೇಲಿನೆಚ್ಚರು ಕಳೆದುಕೊಂಡಿದ್ದರು; ಅವರ ಮಧ್ಯದಲ್ಲಿ ಕುಳಿತು ನಗುತ್ತಲಿದ್ದ ಗುರುಚರಣ.

ಇಷ್ಟರಲ್ಲಿ ಯಾವನೋ ದುಪ್ಪಟಿಯಿಂದ ಮೋರೆ ಮುಚ್ಚಿಕೊಂಡು ಬಂದು, ಅವನ ಹೆಗಲ ಮೇಲೆ ಮೆಲ್ಲಗೆ ಕೈಯಿಟ್ಟ. ಅವನು ಬೆಚ್ಚಿಬಿದ್ದು "ಯಾರು?" ಎಂದು ಕೇಳಿದ.

"ನಾ ಪಾರಸ. ದೊಡ್ಡಪ್ಪಾ, ಮನೆಗೆ ನಡೆಯಿರಿ."

"ಮನೆಗೇ? ನಡೆ."

ಉತ್ಸವ ಮಂಡಪದ ಬೆಳಕೊಂದಿಷ್ಟು ಹೊರಗೆ ಬೀದಿಗೆ ಬಿದ್ದಿತ್ತು. ಅಲ್ಲಿಗೆ ತಲುಪಿದ ಬಳಿಕ ಪಾರಸ ನೆಟ್ಟ ದಿಟ್ಟಿಯಿಂದ ದೊಡ್ಡಪ್ಪನ ಮೋರೆ ನೋಡತೊಡಗಿದ. ಕಣ್ಣುಗಳಲ್ಲಿ ಆ ಜ್ಯೋತಿಯಿಲ್ಲ; ಮುಖದಲ್ಲಿ ಆ ತೇಜವಿಲ್ಲ; ದೆವ್ವ ಬಡಿದುಕೊಂಡಂತೆ ಆಗಿಬಿಟ್ಟಿದ್ದಾನೆ ಮನುಷ್ಯ! ಇಷ್ಟು ದಿನವಿಲ್ಲದ ಕಣ್ಣೀರು ಈಗವನ ಕಣ್ಣಿಂದ ಹರಿಯತೊಡಗಿತು. ಜನರೆದುರು ಲಜ್ಜಿತಗೊಳಿಸುವಂತಹ ವಸ್ತುವಾವುದೂ ದೊಡ್ಡಪ್ಪನಲ್ಲಿ ಉಳಿದಿಲ್ಲ, ಈ ಅರ್ಧ ಸಚೇತನ ದೇಹವನ್ನು ಬಿಟ್ಟು ಅದು ಹೊರಟುಹೋಗಿದೆ ಎಂಬುದನ್ನು ಅವನ ಕಣ್ಣುಗಳು ಇಂದು ಕಂಡವು. ಅವನೆಂದ "ಕಾಶಿಗೆ ಹೋಗಬೇಕೆಂದು ನೀವು ಬಹಳ ಬಯಸುತ್ತಿದ್ದಿರಿ ದೊಡ್ಡಪ್ಪಾ; ಹೋಗುವಿರಾ?"

ಗುರುಚರಣ ಕಂಗಾಲನಂತೆ ನುಡಿದ: "ಹೋಗುತ್ತೇನೆ ಪಾರಸ, ಹೋಗುತ್ತೇನೆ. ಆದರೆ ಯಾರು ಕರೆದುಕೊಂಡು ಹೋಗುವರು ನನ್ನನ್ನು?"

"ನಾ ಕರೆದುಕೊಂಡು ಹೋಗುವೆ, ದೊಡ್ಡಪ್ಪಾ."

"ಹಾಗಾದರೆ ನಡೆ, ಮನೆಗೊಂದಿಷ್ಟು ಹೋಗಿ ಸಾಮಾನು ತೆಗೆದುಕೊಂಡು ಬರುವ."

"ಬೇಡ ದೊಡ್ಡಪ್ಪ ಇನ್ನು ಆ ಮನೆಗೆ ಹೋಗುವುದು ಬೇಡ. ಅಲ್ಲಿಯದೇನೂ ಬೇಡ ನಮಗಿನ್ನು."

ಗುರುಚರಣನಿಗೆ ಒಮ್ಮೆಲೆ ಎಚ್ಚರು ಹುಟ್ಟಿತೇನೋ. ಕ್ಷಣ ನೀರವವಾಗಿದ್ದು ಕೇಳಿದ: "ಏನೂ ಬೇಡವೆ? ಆ ಮನೆಯದು ನಮಗಿನ್ನು ಏನೂ ಬೇಕಾಗಿಲ್ಲವೆ?"

ಪಾರಸ ಕಣ್ಣೊರಸಿಕೊಳ್ಳುತ್ತಾ ಹೇಳಿದ: "ಉಂಹೂ ದೊಡ್ಡಪ್ಪ, ಏನೂ ಬೇಡ. ಅವುಗಳನ್ನು ತೆಗೆದುಕೊಳ್ಳುವವರು ಬೇರೆ ಬಹಳ ಜನ ಇದ್ದಾರೆ ಅಲ್ಲಿ ನಡೆಯಿರಿ."

"ನಡೆ."

ಗುರುಚರಣ ಪಾರಸನ ಕೈ ಹಿಡಿದುಕೊಂಡ. ಜನಶೂನ್ಯ ಅಂಧಕಾರಮಯ ಮಾರ್ಗದಿಂದ ನಿಲ್ದಾಣದ ಕಡೆಗೆ ನಡೆದರಿಬ್ಬರೂ.



# ಸಮಾಜ ಪುಸ್ತಕಾಲಯ, ಧಾರವಾಡ

## ನಮ್ಮಲ್ಲಿ ದೊರೆಯುವ ಉತ್ತಮ ಪುಸ್ತಕಗಳು.

### ಕಾಮಶಾಸ್ತ್ರದ ಗ್ರಂಥಗಳು

| | |
|---|---|
| ಪ್ರೇಮಕಲಾ (೪ನೇ ಆ.) | ೧-೮-೦ |
| ಪೌರುಷ | ೧-೮-೦ |
| ರತಿರಹಸ್ಯ (೩ನೇ ಆ.) | ೧-೮-೦ |
| ಕಾಮದಗುಟ್ಟು | ೧-೮-೦ |
| ಭ್ರಾಂತಿ ಮತ್ತು ಲೈಂಗಿಕ ಶಿಕ್ಷಣ | ೧-೮-೦ |
| ಸ್ವರತಿ (೩ನೇ ಆ.) | ೧-೮-೦ |
| ಗರ್ಭನಿರೋಧ | ೧-೮-೦ |
| ದಾಂಪತ್ಯದರ್ಶನ | ೧-೮-೦ |
| ಕಾಮಕುಂಜ | ೧-೮-೦ |
| ವಿಕೃತಕಾಮ | ೧-೮-೦ |
| ಅನಂಗರಂಗ | ೧-೮-೦ |
| ವಾತ್ಸಾಯನ ಕಾಮಸೂತ್ರ | ೩-೦-೦ |
| ಸಂತಾನನಿರೋಧ | ೧-೦-೦ |
| ಅವಿವಾಹಿತರ ಸಮಸ್ಯೆ | ೧-೦-೦ |

### ಶರತ್ ಸಾಹಿತ್ಯ

| | |
|---|---|
| ರಾಜಲಕ್ಷ್ಮಿ | ೧-೮-೦ |
| ಪರಿಣೀತಾ | ೦-೧೨-೦ |
| ಪ್ರೇಮಪಥ | ೦-೩-೦ |
| ಮಹೇಶ | ೦-೩-೦ |
| ಹೇಮಾಂಗಿನಿ | ೦-೩-೦ |
| ಅಭಾಗಿನಿಯ ಸ್ವರ್ಗಾರೋಹಣ | ೦-೧-೬ |
| ಮಂಗಲ ಸೂತ್ರ | ೦-೨-೦ |
| ವೈಕುಂಠನ ಮೃತ್ಯುಪತ್ರ | ೧-೮-೦ |

### ಸರಸಸಾಹಿತ್ಯ

| | |
|---|---|
| ಹೊಂಬಿಸಿಲು (ಶಾಮಲಾದೇವಿ) | ೧-೮-೦ |
| ಬೆಳಕಿನ ಕತ್ತಲೆ (ಮಲ್ಲಾರಿ) | ೦-೧೨-೦ |
| ಸಾಲುದೀಪ (ಜೋಶಿ) | ೧-೮-೦ |
| ಮಾವಿನತೋಪು (ಕಾದಂಬರಿ) | ೦-೧೦-೦ |
| ಮನೆಯ ಸುಖಶಾಂತಿ | ೦-೧೨-೦ |
| ಪ್ರತಿಬಿಂಬ (೭ ಕತೆಗಳು) | ೦-೬-೦ |
| ತೂರಯಾ (ಪ್ರೇಮಚಂದ) | ೦-೫-೦ |
| ಘಾಟೀಮುದುಕ (ದೇವುಡು) | ೧-೮-೦ |
| ಕೆಲವು ನೀಳ್ಗತೆಗಳು | ೦-೧೨-೦ |
| ಅನ್ನಪೂರ್ಣಾಮಂದಿರ | ೨-೦-೦ |

### ಜಾನಪದ ಸಾಹಿತ್ಯ

| | |
|---|---|
| ಮಲ್ಲಿಗೆ ದಂಡೆ | ೧-೮-೦ |
| ಜೀವನ ಸಂಗೀತ | ೦-೧೦-೦ |
| ಗರತಿಯ ಹಾಡು | ೧-೦-೦ |
| ಮಾನೌಮಿ ಚೌಪದಿ | ೦-೩-೦ |

### ಬಾಲವಾಙ್ಮಯ

| | |
|---|---|
| ಓತೀಕಾಟನ ತಂಗಿ | ೦-೩-೦ |
| ನರಿಗಳ ತಂತ್ರ | ೦-೩-೦ |
| ಚಂದಪ್ಪ | ೦-೩-೦ |
| ಜಾಣಗುಬ್ಬಿ | ೦-೩-೦ |
| ಮುದ್ದಮ್ಮನ ಸಂಸಾರ | ೦-೩-೦ |
| ರೆಕ್ಕೆಇನಕೃಪ್ಪ | ೦-೩-೦ |
| ಗೆಳೆಯ | ೦-೩-೦ |
| ತಿರುವು ಮುರುವು | ೦-೩-೦ |
| ಮಹಾತ್ಮಾ ಗಾಂಧಿ | ೦-೫-೦ |
| ಕಿಟ್ ಕಿಟ್ ಕಿಟ್ಟು | ೦-೩-೦ |
| ಹಾಡೋಣ ರಾಜ | ೦-೧-೦ |

### ಸಾಮುದ್ರಿಕ ಶಾಸ್ತ್ರ

| | |
|---|---|
| ಕೈಗನ್ನಡಿ (೬೦ ಚಿತ್ರ) | ೧-೮-೦ |